

## ಕನ್ನಡ ವಿಶ್ವವಿದ್ಯಾನಿಲಯ
## ಹಂಪಿ

೨೦೧೨-೧೩ ನೇ ಸಾಲಿನ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸುತ್ತಿರುವ ಸಂಶೋಧನಾ ನಿಬಂಧ

# ಆರ್ಯಾಂಬ ಪಟ್ಟಾಭಿ ಅವರ ಸಣ್ಣಕಥೆಗಳಲ್ಲಿನ ಸ್ತ್ರೀಪಾತ್ರಗಳು




*ನಿಬಂಧಕಾರರು*

**ರಂಗನಾಥ ಜಿ.ಆರ್.**
ನೋಂದಣಿ ಸಂಖ್ಯೆ KVTMKS-00603
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ., ಹಂಪಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ, ಮೈಸೂರು

*ಮಾರ್ಗದರ್ಶಕರು*

**ಡಾ. ಡಿ. ಸುಮಂಗಳ**
ಕನ್ನಡ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು





**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
ಜಯಲಕ್ಷ್ಮಿಪುರಂ, ಮೈಸೂರು
೨೦೧೨-೧೩



## ಕನ್ನಡ ವಿಶ್ವವಿದ್ಯಾನಿಲಯ
## ಹಂಪಿ

೨೦೧೨-೧೩ ನೇ ಸಾಲಿನ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸುತ್ತಿರುವ ಸಂಶೋಧನಾ ನಿಬಂಧ

# ಆರ್ಯಾಂಬ ಪಟ್ಟಾಭಿ ಅವರ ಸಣ್ಣಕಥೆಗಳಲ್ಲಿನ ಸ್ತ್ರೀಪಾತ್ರಗಳು




*ನಿಬಂಧಕಾರರು*

**ರಂಗನಾಥ ಜಿ.ಆರ್.**
ನೋಂದಣಿ ಸಂಖ್ಯೆ KVTMKS-00603
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ., ಹಂಪಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ, ಮೈಸೂರು

*ಮಾರ್ಗದರ್ಶಕರು*

**ಡಾ. ಡಿ. ಸುಮಂಗಳ**
ಕನ್ನಡ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
ಜಯಲಕ್ಷ್ಮಿಪುರಂ, ಮೈಸೂರು
೨೦೧೨-೧೩

# ದೃಢೀಕರಣ ಪ್ರಮಾಣ ಪತ್ರ

೨೦೧೨-೧೩ನೇ ಸಾಲಿನಲ್ಲಿ ಕ್ರಮಸಂಖ್ಯೆ KVTMKS-00603ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ರಂಗನಾಥ ಜಿ.ಆರ್. ಅವರು ನನ್ನ ಮಾರ್ಗದರ್ಶನದಲ್ಲಿ **"ಆರ್ಯಾಂಬ ಪಟ್ಟಾಭಿ ಅವರ ಸಣ್ಣಕಥೆಗಳಲ್ಲಿನ ಸ್ತ್ರೀಪಾತ್ರಗಳು"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ. ಡಿ.ಸುಮಂಗಳ)**
ಮಾರ್ಗದರ್ಶಕರು
ಕನ್ನಡ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು

ಸ್ಥಳ : ಮೈಸೂರು
ದಿನಾಂಕ : ೨೨-೦೭-೨೦೧೩

# ಅಭ್ಯರ್ಥಿಯ ಘೋಷಣಾ ಪತ್ರ

"ಆರ್ಯಾಂಬ ಪಟ್ಟಾಭಿ ಅವರ ಸಣ್ಣಕಥೆಗಳಲ್ಲಿನ ಸ್ತ್ರೀಪಾತ್ರಗಳು" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTMKS-00603 ರ ವಿದ್ಯಾರ್ಥಿಯಾದ ನಾನು ೨೦೧೨೧೩ನೇ ಸಾಲಿನ ಪರೀಕ್ಷೆಗಾಗಿ ಡಾ. ಡಿ.ಸುಮಂಗಳ, ಕನ್ನಡ ಸಹ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು, ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

G. R. Ranganath

ರಂಗನಾಥ ಜಿ.ಆರ್.
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಸ್ಥಳ : ಮೈಸೂರು
ದಿನಾಂಕ : ೨೨-೦೭-೨೦೧೩

# ಪರಿವಿಡಿ



* * *

## ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕ ಸಣ್ಣಕಥಾ ಪ್ರಕಾರಕ್ಕೆ ಈಗಾಗಲೇ ಶತವರ್ಷ ಕಳೆದಿದೆ. ಇದು ಕನ್ನಡದ ಅನೇಕ ಕಥೆಗಾರರನ್ನು ತನ್ನೊಡಲೊಳಗೆ ತಬ್ಬಿಕೊಂಡು ಒಂದು ಪ್ರಕಾರವಾಗಿ ಬೆಳೆದಿದೆ. ಇದರ ಬೇರುಗಳು ಕಥಾಸರಿತ್ಸಾಗರ, ಪಂಚತಂತ್ರ, ಜಾತಕಕತೆಗಳು, ಜೈನಕತೆಗಳು, ಸೂಫಿ ಹಾಗೂ ಜನಪದ ಕಥೆಗಳು ಹೀಗೆ ವಿವಿಧ ಪ್ರಾಚೀನ ಕಥಾಗುಚ್ಛಗಳಲ್ಲಿ ಹರಡಿವೆ. ಈ ಹಳೆಯ ಕಥೆಗಳು ಆಧುನಿಕ ಕಥೆಗಳಲ್ಲಿ ವಿವಿಧ ವಿನ್ಯಾಸಗಳಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡಿವೆ. ಸಣ್ಣ ಕಥಾ ಸಾಹಿತ್ಯದ ಆರಂಭದಲ್ಲಿ ಹುಟ್ಟಿದ ಕಥೆಗಳು ಕೇಳಿಕೊಂಡು ಸಾಮಾಜಿಕ ಪ್ರಶ್ನೆಗಳನ್ನು ಸಾಂಸ್ಕೃತಿಕ ಕಾಳಜಿಗಳನ್ನು ಈಗಿನ ಆಧುನಿಕ ಸಣ್ಣಕತೆಗಳಲ್ಲಿ ನೋಡಿದಾಗ ಈ ಪ್ರಕಾರದಲ್ಲಿ ಅಗಾಧವಾದ ಬದಲಾವಣೆ ಹಾಗೂ ಬೆಳವಣಿಗೆ ಉಂಟಾಗಿರುವುದನ್ನು ಕಾಣಬಹುದು. ಆಧುನಿಕ ಸಣ್ಣಕತೆಗಳಲ್ಲಿ ಕನ್ನಡದ ಆರಂಭದ ಕತೆಗಾರರು ಇಂಗ್ಲಿಷ್ ಶಿಕ್ಷಣ, ವಿಧವಾ ವಿವಾಹ, ನೈತಿಕತೆ, ಸ್ತ್ರೀ ಸ್ವಾತಂತ್ರ್ಯ, ಸಮಾನತೆಯ ಪ್ರಶ್ನೆಗಳನ್ನು ಎದುರಿಸಿರುವುದನ್ನು ಪ್ರಧಾನವಾಗಿ ಕಾಣಬಹುದು. ಆಧುನಿಕ ಸಣ್ಣಕತೆಗಳಲ್ಲಿ ಸ್ತ್ರೀ ಸಂವೇದನೆ, ದಲಿತ ಸಮಸ್ಯೆ, ನಿರುದ್ಯೋಗ ಸಮಸ್ಯೆ, ಪಟ್ಟಣ, ನಗರಗಳ ಸಮಸ್ಯೆ, ಬಡತನದ ಸಮಸ್ಯೆಗಳು, ವೇಶ್ಯಾವಾಟಿಕೆ, ಗ್ರಾಮೀಣ ಬದುಕು, ಪರಿಸರ ಹಾಗೂ ಜಾಗತೀಕರಣ, ಸಂಬಂಧ, ಕೌಟಂಬಿಕ ಚಿತ್ರಣ, ಪ್ರೀತಿ, ಪ್ರೇಮಚಿತ್ರಣ, ಸಮಾಜ, ಮಾನವೀಯ ಸಂಬಂಧಗಳು, ಸಮಾಜ ಮತ್ತು ವಿವಿಧ ಪ್ರಗತಿಪರ ಚಳುವಳಿಗಳ ಮಹತ್ವ ಹೀಗೆ ವಿವಿಧ ಸಮಸ್ಯೆಗಳು, ಸಂವೇದನೆಗಳು ಹಾಗೂ ಸವಾಲುಗಳು

ಕಾಣಿಸಿಕೊಂಡು, ಸಣ್ಣ ಕತೆಯ ವಸ್ತುಗಳ ವ್ಯಾಪ್ತಿ ಹಾಗೂ ಮಹತ್ವವನ್ನು ಮತ್ತಷ್ಟು ಹಿಂದಿಗಿಂತ ಹೆಚ್ಚಿನ ಜವಾಬ್ದಾರಿಯನ್ನು ವಿಸ್ತರಿಸಿವೆ.

ಕನ್ನಡದಲ್ಲಿ ಕಾದಂಬರಿ ತರುವಾಯ ಸಣ್ಣಕತೆಯೇ ಅತ್ಯಂತ ಲೋಕಪ್ರಿಯವಾದ ರೂಪವಾಗಿದೆ. ಈ ಮಾತು ಭಾರತದ ಉಳಿದೆಲ್ಲ ಪ್ರಾಂತಗಳ ಸಾಹಿತ್ಯಗಳಿಗೂ ಅನ್ವಯಿಸುತ್ತದೆ. ಕತೆಯ ಬಗ್ಗೆ ಮನುಷ್ಯನಿಗಿರುವ ಜನ್ಮಜಾತವಾದ ಕುತೂಹಲವೂ ಅಲ್ಲದೆ ಸಣ್ಣಕತೆ ಭಾವಗೀತದೊಡನೆ ಹೊಸದಾಗಿ ಬಂದ ಸಾಹಿತ್ಯದ ಪ್ರಕಾರವಾಗಿರುವುದು ಇದಕ್ಕೊಂದು ಕಾರಣವೆನ್ನಬಹುದು.

ಆಧುನಿಕ ಕನ್ನಡ ಸಾಹಿತ್ಯ ಪ್ರಕಾರದಲ್ಲಿ ಈವರೆಗೆ ಬಂದಿರುವ ಸಣ್ಣಕತೆಗಳ ಸಂಖ್ಯೆಯನ್ನು ಹೇಳುವುದು ಅತ್ಯಂತ ದುಸ್ತರವಾದ ಕೆಲಸವಾಗಿದೆ. ದಿನಪತ್ರಿಕೆ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಎಡೆಬಿಡದೆ, ನಿರಂತರವಾಗಿ ಸಣ್ಣಕತೆಗಳು ಹುಟ್ಟುತಲೇ ಇವೆ. "ಹಿಂದಿನ ಕಾಲದಲ್ಲಿ ಸಂಸ್ಕೃತದಲ್ಲಿ ಲೆಕ್ಕವಿಲ್ಲದಷ್ಟು ಸುಭಾಷಿತಗಳು ಜನ್ಮತಾಳಿದಂತೆ ಈಗಿನ ಕಾಲದಲ್ಲಿ ಸಣ್ಣಕತೆಗಳು ಹುಟ್ಟುತ್ತಿವೆ" ಎಂಬುದಾಗಿ ಕೀರ್ತಿನಾಥ ಕುರ್ತುಕೋಟಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈ ಕ್ರಮವಾಗಿ ಕಥಾಪ್ರಕಾರ ಬೆಳೆದರೂ ಸಣ್ಣಕಥಾ ಸಾಹಿತ್ಯ ಪ್ರಕಾರಕ್ಕೆ ಕ್ರಮಬದ್ಧವಾದ ಬೆಳವಣಿಗೆ ಇಲ್ಲವೆಂದೇ ಹೇಳಬಹುದು. ಇವುಗಳಲ್ಲಿ ಕೆಲವು ಪತ್ರಿಕೆಗಳು ಪುಟ ತುಂಬವುದಕ್ಕಾಗಿ ಬರೆದವುಗಳು. ಕೆಲವು ಲೇಖಕರ ಅಡ್ಡ ಪ್ರವೃತ್ತಿಯ ಫಲದಿಂದಾಗಿ ಬಂದವುಗಳು, ಕೆಲವು ಮಾತ್ರ ಪರಿಪೂರ್ಣವಾದ ಸಾಹಿತ್ಯ ಕೃತಿಗಳಾಗಿವೆ. ಆದ್ದರಿಂದ ಭಾವಗೀತ ಹಾಗೂ ಹರಟೆಗಳೊಡನೆ ಪಾಶ್ಚಾತ್ಯ ಸಾಹಿತ್ಯದಿಂದ ಬಂದ ಸಣ್ಣಕತೆ ಭಾವಗೀತದಂತೆ ನವೋನವ-ಸಂಸ್ಕಾರವನ್ನು ಪಡೆದು ಸಾಹಿತ್ಯದ ಒಂದು ಪ್ರಮುಖ ಅಂಗವಾಗಿ ಬೆಳೆದು ಬರಲಿಲ್ಲ.

ಸಣ್ಣಕತೆಯ ತಂತ್ರ, ವ್ಯಾಪ್ತಿ ಬರವಣಿಗೆಯ ರೀತಿ ಅದರ ಒಟ್ಟಂದದ ಪರಿಣಾಮವಾಗಿ ಹಾಗೂ ಅದು ಹೊಂದಬಹುದಾದ ಅನೇಕ ರೂಪಗಳು, ಇವುಗಳ ಬಗ್ಗೆ ವಿಮರ್ಶಕರು ಅಭ್ಯಾಸಪೂರ್ಣವಾದ ಲೇಖನಗಳನ್ನು ಬರೆದು, ಅದರ ಬೆಳವಣಿಗೆ ತಿಳಿದುಕೊಂಡಷ್ಟು ಸುಲಭವಾಗಿಲ್ಲವೆಂದು ಮನವರಿಕೆ ಮಾಡಿಕೊಟ್ಟಿದ್ದಾರೆ. ಸಣ್ಣಕತೆ ರಚನೆಯ ಬಗ್ಗೆ ಚರ್ಚೆ ನಡೆದು ಅದರ ಸ್ವರೂಪ ನಿಶ್ಚಿತವಾದ ಮೇಲೆ ಅದರ ಬರವಣಿಗೆಯು ಸುಲಭವಾಗುತ್ತ ಬಂದಿತ್ತು. ಸಾಹಿತ್ಯದ ಉಳಿದ ಪ್ರಕಾರಗಳಂತೆ ಸಣ್ಣ ಕತೆ ಒಂದು ಮೊತ್ತದಲ್ಲಿ ಸಾಹಿತ್ಯದಲ್ಲಿ ಪ್ರಗತಿ ಕಾಣಲಿಲ್ಲ ಎಂಬ ಅಂಶ ಕಂಡು ಬರುತ್ತದೆ. ಮಾಸ್ತಿಯವರಂತೆ ಸಣ್ಣಕತೆಯನ್ನೇ ತಮ್ಮ ಅಭಿವ್ಯಕ್ತಿಯ, ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಂಡ ಕತೆಗಾರರು ಹೊಸ ಪೀಳಿಗೆಯಲ್ಲಿ ಹುಟ್ಟಿ ಬರಲಿಲ್ಲ. ಆದರೂ ಕತೆಗಳ ಪ್ರಮಾಣ ಸಾಕಷ್ಟು ಇದೆ. ಕಾರಣ ಸಣ್ಣಕತೆಯ ಅತ್ಯಂತ ಕಡಿಮೆ ಸಮಯ ಮುಕ್ತಾಯವಾಗುವುದರಿಂದ ಹಾಗೂ ಒಂದು ಘಟನೆ, ಒಂದು ಸಣ್ಣ ವಸ್ತುಗಳು ಕತೆಗಳಲ್ಲಿ ಸ್ಥಾನ ಪಡೆದಿರುವುದರಿಂದ ಸಣ್ಣಕತೆ ಜನಪ್ರಿಯತೆ ಪಡೆದುಕೊಂಡಿವೆ.

ಸಣ್ಣಕತೆಯ ಪ್ರಕಾರಕ್ಕೆ ವಿಶಿಷ್ಟರೂಪ ನೀಡಿ ಅದನ್ನು ಪರಿಣಾಮಕಾರಿ ಮಾಧ್ಯಮವನ್ನಾಗಿ ಬಳಸಿದವರಲ್ಲಿ ಮಾಸ್ತಿಯವರು ಮೊದಲಿಗರು. ಅಲ್ಲಿಂದೀಚೆಗೆ ಹಲವಾರು ಲೇಖಕರು ಈ ಪ್ರಕಾರವನ್ನು ಬೆಳಸಿದ್ದಾರೆ. ಆರಂಭದ ಸಣ್ಣಕತೆಗಳನ್ನು ಬರೆದವರ ಸಾಲಿಗೆ ಪಂಜೆ ಮಂಗೇಶರಾಯರು, ಕೆರೂರು ವಾಸುದೇವಚಾರ್ಯರು, ಎಂ.ಎನ್. ಕಾಮತ್‌ರು ಸೇರುತ್ತಾರೆ. ಈ ನಿಟ್ಟಿನಲ್ಲಿ ಈ ಕ್ಷೇತ್ರದಲ್ಲಿ ಕೃಷಿಗೈದವರಲ್ಲಿ ಆನಂದ, ಅಶ್ವತ್ಥ ಮುಂತಾದವರಿಂದ ಹಿಡಿದು ಇಂದಿನವರೆಗೆ ಹಲವಾರು ಲೇಖಕರು ಈ ಪ್ರಕಾರದಲ್ಲಿ ಕೆಲಸ ಮಾಡಿದ್ದಾರೆ.[1]

---

1. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕೀರ್ತಿನಾಥ ಕುರ್ತಕೋಟಿ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ೨೦೦೮, ಪು. ೧೪೦

ಆರ್ಯಾಂಬ ಪಟ್ಟಾಭಿ ಅವರು ಉತ್ತಮ ಕಾದಂಬರಿಗಾರ್ತಿ. 'ಹೊಂಗನಸು' ಎಂಬ ಕಾದಂಬರಿಯ ಮೂಲಕ ಹಾಗೂ 'ಕಪ್ಪು ಬಿಳಿಪು' ಕಾದಂಬರಿಯ ಆಧಾರಿತ ಸಿನಿಮಾದಿಂದ ನಮ್ಮ ನೆನಪಿನಲ್ಲಿ ಉಳಿದಿದ್ದರೂ ಸಣ್ಣಕತೆ ಅವರ ಅಚ್ಚುಮೆಚ್ಚಿನ ಪ್ರಕಾರಗಳಲ್ಲೊಂದಾಗಿದೆ. ಎಲ್ಲ ಕಾಲಘಟ್ಟಗಳಲ್ಲು, ಎಲ್ಲ ಚಳುವಳಿ ಸಂದರ್ಭದಲ್ಲಿಯೂ ಆರೋಗ್ಯಕರವಾದ ನಿಲುವನ್ನು ಇಟ್ಟುಕೊಂಡು ಕಥೆಗಳನ್ನು ಬರೆದವರಲ್ಲಿ ಪಟ್ಟಾಭಿ ಅವರು ಒಬ್ಬರು. ಇವರ ಕಥೆಗಳಲ್ಲಿ ಕೌಟುಂಬಿಕ ಚಿತ್ರಣ ಪ್ರೀತಿ, ಪ್ರೇಮ, ವಾತ್ಸಲ್ಯ, ತಾಯ್ತನ, ಆಧುನಿಕ ಧೋರಣೆಯುಳ್ಳ ಕಥೆಗಳು, ಮಾನವೀಯ ಸಂಬಂಧವುಳ್ಳ ಕತೆಗಳು - ಹೀಗೆ ಒಂದು ಪಟ್ಟಿಯನ್ನೇ ಮಾಡಬಹುದು.

ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಆರ್ಯಾಂಬ ಪಟ್ಟಾಭಿ ಅವರ ಸಾಧನೆ ಗಮನಾರ್ಹವಾದುದಾಗಿದೆ. ಆರ್ಯಾಂಬ ಅವರು ಕನ್ನಡ ವಾಙ್ಮಯಕ್ಕೆ ಕಾಲಿಟ್ಟಿದ್ದೇ 'ಹೊಂಗನಸು' ಕಾದಂಬರಿಯ ಮೂಲಕವೇ ಆದರೂ ಅವರ ಎರಡನೆಯ ಕೃತಿಯೇ 'ಮರಳಿ ಬಂದ ಮಮತೆ' ಎಂಬ ಕಥಾಸಂಕಲನ ಎಂಬುದು ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವಾಗಿದೆ. ಆರ್ಯಾಂಬರ ಕಥೆಗಳನ್ನು ಆಯಾ ಕಾಲದ ಸಾಹಿತ್ಯದ ಇತ್ಯಾತ್ಮಕ ಅಂಶಗಳು ಮತ್ತು ಪರಿಮಿತಿಗಳನ್ನು ಒಳಗೊಂಡ ಮೌಲ್ಯಮಾಪನ ಮಾಡಬೇಕಾಗುತ್ತದೆ. ಪ್ರಸುತ್ತ ಪ್ರಬಂಧದಲ್ಲಿ ಆರ್ಯಾಂಬರವರ ಕತೆಗಳನ್ನು ಸಾಹಿತ್ಯದ ಹಿನ್ನೆಲೆಯಲ್ಲಿ ವಿವೇಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

* * *

## ಅಧ್ಯಾಯ - ೨

# ಕಥೆಗಾರ್ತಿ ಆರ್ಯಾಂಬ ಪಟ್ಟಾಭಿ ಅವರ ಪರಿಚಯ

ಕನ್ನಡ ವಾಙ್ಮಯದಲ್ಲಿ ಅತ್ಯಂತ ಪ್ರಸಿದ್ಧ ಲೇಖಕಿಯರಲ್ಲಿ ಆರ್ಯಾಂಬ ಪಟ್ಟಾಭಿ ಅವರು ಒಬ್ಬರು. ಆಧುನಿಕ ಕನ್ನಡ ಸಾಹಿತ್ಯ ಎಲ್ಲಾ ಪ್ರಕಾರಗಳಲ್ಲಿ ಕೃಷಿಗೈದಿರುವ ಇವರು ಎರಡನೇ ತಲೆಮಾರಿನ ಲೇಖಕಿಯಾದ ಇವರು ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ಇವರು 1936 ರ ಮಾರ್ಚ್ ಹನ್ನೆರಡರಂದು ಮಂಡ್ಯದಲ್ಲಿ ಜನಿಸಿದರು. ಇವರು 'ಕನ್ನಡದ ಕಣ್ವ' ಎಂದೇ ಪ್ರಸಿದ್ಧರಾದ ಬಿ.ಎಂ.ಶ್ರೀಕಂಠಯ್ಯನವರ ತಮ್ಮನ ಮಗಳು, ಶ್ರೇಷ್ಠ ಕಾದಂಬರಿಗಾರ್ತಿ ತ್ರಿವೇಣಿಯವರ ಸ್ವಂತ ತಂಗಿಯೂ ಹೌದು. ಆರ್ಯಾಂಬ ಎಂಬುದು ಇವರ ಹೆಸರು, ಪಟ್ಟಾಭಿ ಪತಿಯಾದ ಪಟ್ಟಾಭಿ ರಾಮಯ್ಯನವರದು. ಹಾಗಾಗಿ ಇವರು ಆರ್ಯಾಂಬ ಪಟ್ಟಾಭಿಯೆಂದೇ ಹೆಸರು ಪಡೆದರು.

ಆರ್ಯಾಂಬ ಅವರು ತಮ್ಮ ಪ್ರಾಥಮಿಕ, ಪ್ರೌಢಶಾಲಾ ಮತ್ತು ಕಾಲೇಜು ಶಿಕ್ಷಣವನ್ನು ಮಂಡ್ಯದಲ್ಲಿ ಪಡೆದರು. ತಮ್ಮ ಉನ್ನತ ಶಿಕ್ಷಣ ಅಭ್ಯಾಸವನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಡೆಸಿದ ಇವರು ಸಮಾಜಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಾದ ಕಾದಂಬರಿ, ಸಣ್ಣಕಥೆ, ವ್ಯಕ್ತಿಚಿತ್ರಣ, ಜೀವನ ಚರಿತ್ರೆ, ನಾಟಕ, ವಿಡಂಬನೆ, ಪ್ರಬಂಧ, ಪ್ರವಾಸ ಸಾಹಿತ್ಯ, ವಿಚಾರ ಸಾಹಿತ್ಯ, ಕ್ರೀಡಾ ಸಾಹಿತ್ಯ, ಮಕ್ಕಳ ಸಾಹಿತ್ಯ ಮತ್ತು ಸಂಪಾದನೆ ಇನ್ನು ಮೊದಲಾದ ಸಾಹಿತ್ಯ ವ್ಯವಸಾಯದ ಕ್ಷೇತ್ರಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ.

ಉತ್ತಮ ಕಾದಂಬರಿಗಾರ್ತಿಯಾಗಿರುವ ಆರ್ಯಾಂಬ ಪಟ್ಟಾಭಿಯವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿ ರಾಜ್ಯ, ರಾಷ್ಟ್ರ ಪ್ರಶಸ್ತಿ ಪಡೆದುಕೊಂಡಿವೆ. ಕನ್ನಡ ಚಲನಚಿತ್ರ 'ಕಪ್ಪುಬಿಳುಪು' ಆರ್ಯಾಂಬ ಪಟ್ಟಾಭಿಯವರ ಕಾದಂಬರಿಯ ಆಧರಿತ ಚಲನಚಿತ್ರವಾಗಿದ್ದು, ಇದರಲ್ಲಿ ಕಲ್ಪನಾರವರ ಅಭಿನಯ ಅದ್ಭುತವಾಗಿ ಮೂಡಿ ಬಂದಿದೆ. ಇದಲ್ಲದೆ ಇವರ ಕಾದಂಬರಿ ಆಧರಿಸಿದ ಚಲನಚಿತ್ರಗಳೆಂದರೆ 'ಎರಡು ಮುಖ', 'ಸವತಿಯ ನೆರಳು', 'ಮರಳಿಗೂಡಿಗೆ' ರಾಜ್ಯಪ್ರಶಸ್ತಿ ಪಡೆದ ಚಲನಚಿತ್ರಗಳಾಗಿವೆ. ಇವರ ಪರಂಪರೆ ಕಾದಂಬರಿ 1985ರಲ್ಲಿ ವಿಶ್ವಕನ್ನಡ ಸಮ್ಮೇಳನದ ನೆನಪಿನಲ್ಲಿ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಕಟಣೆಯಾಗಿದೆ.

ಇವರ ಕಾದಂಬರಿ ಕ್ಷೇತ್ರ ತುಂಬಾ ದೊಡ್ಡದು. 1961 ರಲ್ಲಿ ಮೊದಲ ಕಾದಂಬರಿ 'ಹೊಂಗನಸು' ಪ್ರಕಟವಾಯಿತು. ಮೂವತ್ತಾರಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ಎರಡು ಮುಖ, ಬದುಕಿನ ಬವಣೆಯಲ್ಲಿ, ಮರಳಿಗೂಡಿಗೆ, ದೇವಮಾನವ, ಕಸ್ತೂರಿ, ಕಾಮನಬಿಲ್ಲು, ಪ್ರಕೃತಿ-ಪುರುಷ, ಆರಾಧನೆ, ಬೀಸಿದ ಬಲೆ, ಬೇವು-ಬೆಲ್ಲ, ಸಾಕ್ಷಾತ್ಕಾರ, ಪರಂಪರೆ, ಸಾಕುಮಗ, ಯಜ್ಞಪಶು ಮುಂತಾದವು ಹೆಸರಿಸಲೇ ಬೇಕಾದ ಪ್ರಮುಖ ಕಾದಂಬರಿಗಳಾಗಿವೆ.

ಕತೆಗಾರ್ತಿ ಆರ್ಯಾಂಬ ಪಟ್ಟಾಭಿ ಅವರು ಒಟ್ಟು ನಾಲ್ಕು ಕಥಾಸಂಕಲನಗಳನ್ನು ಹೊರ ತಂದಿದ್ದಾರೆ. 'ಮರಳಿ ಬಂದ ಮಮತೆ' ಮತ್ತು 'ಉದಯರವಿ' 1968ರಲ್ಲಿ, 'ನನ್ನವಳು' 1970ರಲ್ಲಿ ಹಾಗೂ 'ತೆರೆ ಸರಿದಾಗ' 2000ದಲ್ಲಿ ಪ್ರಕಟಣೆಗೊಂಡ ಕಾದಂಬರಿಗಳಾಗಿವೆ. 'ಮರಳಿ ಬಂದಾಗ' ಕಥೆಯಲ್ಲಿ ಇಬ್ಬರು ಗಂಡ-ಹೆಂಡತಿ ಇರುತ್ತಾರೆ. ಅವರು ಒಂದು ನಾಯಿ ಸಾಕಿರುತ್ತಾರೆ. ಮದುವೆಯಾಗಿ ತುಂಬಾ ವರ್ಷವಾದರೂ ಇವರಿಗೆ ಸಂತಾನ ಭಾಗ್ಯ ಇರುವುದಿಲ್ಲ. ನಾಯಿಯನ್ನು ತುಂಬಾ ಪ್ರೀತಿಸುತ್ತಿರುತ್ತಾರೆ. ಕೆಲವೇ ವರ್ಷದಲ್ಲಿ ಅವರಿಗೆ ಒಂದು ಮಗು ಜನಿಸುತ್ತದೆ. ಅನಂತರ ನಾಯಿಯ ಮೇಲೆ ಒಲುಮೆ ಕಡಿಮೆಯಾಗಿ ಮಗುವನ್ನು ಹೆಚ್ಚು ಪ್ರೀತಿಸತೊಡಗುತ್ತಾರೆ. ಆದರೆ ಅವರ ದುರ್ದೈವವೋ ಅಥವಾ

ಗ್ರಹಚಾರವೋ ತಿಳಿಯದು ಮಗು ಕಾಯಿಲೆಗೆ ತುತ್ತಾಗಿ ಮರಣ ಹೊಂದುತ್ತದೆ. ಅನಂತರ ಪುನಃ ಅವರಿಗೆ ನಾಯಿಯ ಮೇಲೆ ಮರಳಿ ಪ್ರೀತಿ ಹುಟ್ಟುತ್ತದೆ. ಇದು 'ಮರಳಿ ಬಂದ ಮಮತೆ'ಯ ಸಂಕ್ಷಿಪ್ತ ಸಾರಾಂಶ. ಆರ್ಯಾಂಬರವರ ಬರವಣಿಗೆ ಸರಳ, ನೇರ ನಿರೂಪಣೆಯಾಗಿದೆ.

ಆರ್ಯಾಂಬ ಪಟ್ಟಾಭಿಯವರು ಅನೇಕ ಮಹನೀಯರುಗಳ ಕುರಿತು ಪುಸ್ತಕ ರಚಿಸಿದ್ದಾರೆ. ಚ. ವಾಸುದೇವಯ್ಯ, ರವೀಂದ್ರ ಠಾಕೂರ್, ತಾಯಿ ತೆರೇಸ, ಹಬ್ಬಗಳು, ವಿಜ್ಞಾನ ಸಾಧಕರು ಭಾಗ-೧, ೨, ೩, ೪ (ಡಾರ್ವಿನ್, ಎಡಿಸನ್, ಗೆಲಿಲಿಯೋ, ಐನ್‌ಸ್ಟೈನ್, ಸರ್. ಸಿ.ವಿ.ರಾಮನ್, ಮೇಡಂ ಕ್ಯೂರಿ ಮತ್ತಿತರರು) ರಣಧೀರ ಕಂಠೀರವ ನರಸಿಂಹರಾಜ ಒಡೆಯರ್, ನಾಲ್ವಡಿ ಕೃಷ್ಣರಾಜ ಒಡೆಯರ್, ಮೇರಿಕ್ಯೂರಿ, ತ್ರಿವೇಣಿ ಮುಂತಾದ ಪುಸ್ತಕಗಳಲ್ಲದೇ ಮಕ್ಕಳ ಪುಸ್ತಕಗಳನ್ನು ಬರೆದಿದ್ದಾರೆ. ಜೊತೆಗೆ ಅನೇಕ ವ್ಯಕ್ತಿಗಳ ಜೀವನ ಚರಿತ್ರೆಯನ್ನು, ಪುಸ್ತಕಗಳನ್ನು ಬರೆದಿದ್ದಾರೆ. 'ಭಾರತದ ಮಹಾಪುರುಷರು' ಎಂಬ ಕೃತಿ 1975ರಲ್ಲಿ ಪ್ರಕಟವಾಯಿತು. 'ಮದರ್ ತೆರೇಸ' ಎಂಬ ಪುಸ್ತಕ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ 1985 ಮತ್ತು 2000 ರಲ್ಲಿ ಪ್ರಕಟವಾಯಿತು.

ಇದಲ್ಲದೇ ಭಾರತದ ಮಹಾಪುರುಷರಾದ ಆದಿ ಶಂಕರಾಚಾರ್ಯರು, ಶ್ರೀ ಬಸವೇಶ್ವರ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ್, ಮಹಾತ್ಮ ಗಾಂಧಿ, ಅರವಿಂದಘೋಷ - ಈ ಏಳು ಜನರ ಜೀವನ ಮತ್ತು ವಿಚಾರಧಾರೆ ಕುರಿತು 'ಭಾರತದ ಮಹಾ ಪುರುಷರು' ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥ 1976 ಮತ್ತು 1977 ರಲ್ಲಿ ಕರ್ನಾಟಕ ರಾಜ್ಯದ ಪದವಿಪೂರ್ವ ಕಾಲೇಜಿನ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿತ್ತು. ಗ್ರಂಥದ ಕೆಲವು ಭಾಗಗಳು ಕರ್ನಾಟಕ ಮತ್ತು ಕೇರಳರಾಜ್ಯದ ಪ್ರೌಢಶಾಲೆಯ ಪಠ್ಯಪುಸ್ತಕಗಳಿಗೆ ಆಯ್ಕೆಯಾಗಿತ್ತು.

ಆರ್ಯಾಂಬ ಪಟ್ಟಾಭಿರವರು ನಾಟಕ ಪ್ರಕಾರದಲ್ಲೂ ಅದ್ವಿತೀಯ ನಾಟಕಗಳನ್ನು ರಚಿಸಿದ್ದಾರೆ. ಇವರ 'ಸಾಲು ದೀಪ', 'ಬೆಕ್ಕಿನ ಕಣ್ಣು' ಇವೆರೆಡು ಬೆಂಗಳೂರು ಆಕಾಶವಾಣಿಯಿಂದ ಪ್ರಸಾರವಾಗಿವೆ. ಬೆಳಕಿನತ್ತ, ದುಡ್ಡಿದ್ದವನೆ ದೊಡ್ಡಪ್ಪ, ಸಾಕುಮಗ, ಕಸ್ತೂರಿ ಈ ಮೂರು ನಾಟಕಗಳು ಮೈಸೂರು ಆಕಾಶವಾಣಿ ನಿಲಯದಿಂದ ಪ್ರಸಾರವಾಗಿವೆ.

ಕ್ರೀಡಾ ಸಾಹಿತ್ಯದಲ್ಲೂ ಕೃಷಿಗೈದಿರುವ ಆರ್ಯಾಂಬ ಅವರು ಕ್ರೀಡೆಯನ್ನು ಕುರಿತು ಸಮಗ್ರ ಅಧ್ಯಯನ ನಡೆಸಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. 1987 ರಲ್ಲಿ ಇವರು 'ಟೆನಿಸ್' ಎಂಬ ಪುಸ್ತಕವನ್ನು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಇವರು ಮುದ್ರಿಸಿ ಪ್ರಕಟಿಸಿದ್ದಾರೆ. ಅಮೇರಿಕಾ, ಕೆನಡ ಮತ್ತು ಸಿಂಗಪುರ ದೇಶಗಳ ಪ್ರವಾಸ ಕೈಗೊಂಡಿರುವ ಇವರು 1997ರಲ್ಲಿ 'ವಿದೇಶಿ ಪ್ರವಾಸ' ಎಂಬ ಪ್ರವಾಸ ಕಥನವನ್ನು ಬರೆದಿದ್ದಾರೆ. ಮಹಿಳೆಯರ ವಿವಿಧ ಸಮಸ್ಯೆಗಳ ಕುರಿತು ಅನೇಕ ಲೇಖನಗಳನ್ನು ಬರೆದಿರುವ ಆರ್ಯಾಂಬ ಅವರು 'ಮಹಿಳೆ - ಒಂದು ಅಧ್ಯಯನ' - 1998ರಲ್ಲಿ, ಸ್ತ್ರೀ-ಸಮಸ್ಯೆ, ಸಾಧನೆ ಎಂಬ ಎರಡು ವಿಚಾರ ಲೇಖನಗಳ ಸಂಕಲಗಳನ್ನೂ ಹೊರತಂದಿದ್ದಾರೆ.

ಆರ್ಯಾಂಬ ಅವರ ಮೂವತ್ತೈದು ಲೇಖನಗಳ 'ಲೇಖಾನುಬಂಧ' ಎಂಬ ಲೇಖನ ಸಂಕಲನ 2004ರಲ್ಲಿ ಪ್ರಕಟಗೊಂಡಿದೆ. ಸಂಪಾದನಾ ಕ್ಷೇತ್ರದಲ್ಲೂ ಸಾಧನೆ ಮಾಡಿರುವ ಇವರು ಮಹಿಳಾ ಸಾಹಿತ್ಯ ಸಮೀಕ್ಷೆ, ಸಾಹಿತ್ಯ ವಿಮರ್ಶೆ ಎಂಬೆರಡು ಸಂಪಾದನ ಗ್ರಂಥಗಳನ್ನು ರಚಿಸಿದ್ದಾರೆ. 'ವಿಶ್ವವಿಜ್ಞಾನಿಗಳು' ಎಂಬ ಇವರ ಗ್ರಂಥ ಪ್ರಕಟಣೆಗೆ ಸಿದ್ಧವಾಗಿದೆ.

ಇಷ್ಟೆಲ್ಲ ಸಾಧಿಸಿದ ಪಟ್ಟಾಭಿ ಅವರಿಗೆ ಸಂದ ಗೌರವ ಪ್ರಶಸ್ತಿಗಳು ಅನೇಕ. ಇವರ 'ಟೆನಿಸ್' ಗ್ರಂಥಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ 'ಮಲ್ಲಿಕಾ ಪ್ರಶಸ್ತಿ', 'ವಿದೇಶ ಪ್ರವಾಸ' ಗ್ರಂಥಕ್ಕೆ "ಕರ್ನಾಟಕ ಸಾಹಿತ್ಯ ಅಕಾಡೆಮಿ" ಪ್ರಶಸ್ತಿ ಹಾಗೂ ರಾಜ್ಯದ ವರ್ಷದ ಅತ್ಯುತ್ತಮ ಗ್ರಂಥ ಪ್ರಶಸ್ತಿ ಲಭಿಸಿದೆ.

ಶ್ರೀಮತಿ ಸಾವಿತ್ರಮ್ಮ ದೇಜಗೌ ಮಹಿಳಾ ಪ್ರಶಸ್ತಿ" ಕರ್ನಾಟಕ ಸರ್ಕಾರದ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ "ಕಿತ್ತೂರು ರಾಣಿ ಚೆನ್ನಮ್ಮ" ಪ್ರಶಸ್ತಿ ಲಭಿಸಿದೆ.

ಕರ್ನಾಟಕ ಜನತಾ ಸೇವಾದಳದ 'ಕರ್ನಾಟಕ ವಿಭೂಷಣ ಪ್ರಶಸ್ತಿ', ಅಂಬಾ ಪ್ರಕಾಶನ, ಯಳಂದೂರು ಅವರಿಂದ 'ಸಂಚಿ ಹೊನ್ನಮ್ಮ' ಪ್ರಶಸ್ತಿ, 'ಆರ್ಯಭಟ ಅಂತರಾಷ್ಟ್ರೀಯ ಸಾಹಿತ್ಯ ಪ್ರಶಸ್ತಿ', ಆದರ್ಶ ಸೇವಾ ಸಂಘದ ವತಿಯಿಂದ 'ಆದರ್ಶ ಸೇವಾರತ್ನ' ಪ್ರಶಸ್ತಿಗಳನ್ನು ಪಡೆದಿರುತ್ತಾರೆ.

ಬೆಂಗಳೂರಿನ ಸಾರಿಗೆ ಸಂಸ್ಥೆಯ 'ರಾಜ್ಯೋತ್ಸವ' ಸಮಾರಂಭದಲ್ಲಿ ಸನ್ಮಾನ. 'ಮೈಸೂರು ಜಿಲ್ಲಾ ಕನ್ನಡ ಚಳವಳಿಗಾರರ ಕೇಂದ್ರ ಸಮಿತಿ' ಮುಖ್ಯಮಂತ್ರಿ ಆರ್. ಗುಂಡುರಾವ್ ಅವರಿಂದ ಸನ್ಮಾನ, 'ದೇಜಗೌ ಸಾಂಸ್ಕೃತಿಕ ಪ್ರತಿಷ್ಠಾನ'ದಿಂದ ಸನ್ಮಾನ, ಮೈಸೂರಿನ 'ಗಣಪತಿ ಸಚ್ಚಿದಾನಂದಸ್ವಾಮಿ ಆಶ್ರಮದಲ್ಲಿ ಸನ್ಮಾನ, ಮೈಸೂರಿನ 'ಬೆಮೆಲ್ ಕನ್ನಡ ಸಂಘ'ದಿಂದ ಸನ್ಮಾನ, ಹಂಪಿ ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ ವಿಭಾಗ ಮದ್ದೂರಿನಲ್ಲಿ ನಡೆಸಿದ ಮಹಿಳಾ ಚಿಂತನ ಸಮಾವೇಶದಲ್ಲಿ ಸನ್ಮಾನ, 'ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀಯ ವಿದ್ಯಾಲಯ'ದಿಂದ ಸನ್ಮಾನ. ಇನ್ನು ಅನೇಕ ಸಂಘ ಸಂಸ್ಥೆಗಳು ಆರ್ಯಾಂಬ ಅವರನ್ನು ಸನ್ಮಾನಿಸಿವೆ.

ರಾಜ್ಯಮಟ್ಟದ ಸಾಹಿತ್ಯ, ಶಿಕ್ಷಣ ಮತ್ತು ಮಕ್ಕಳ ಸಮ್ಮೇಳನಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅವುಗಳೆಂದರೆ, 44ನೇ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ. 1997ರಲ್ಲಿ ಕನ್ನಡ ಲೇಖಕಿಯರ ಸಂಘ ಬೆಂಗಳೂರು, ಭಾರತ-ಭಾರತಿ ಸಂಪದ ರಾಷ್ಟ್ರೋತ್ಥಾನ ಪರಿಷತ್ತಿನ ಸಮ್ಮೇಳನ, ತ.ರಾ.ಸು ಸಾಹಿತ್ಯ ವಿಚಾರಗೋಷ್ಠಿ, ಅಖಿಲ ಕರ್ನಾಟಕ ಲೇಖಕಿಯರ ಎರಡನೆ ಸಮ್ಮೇಳನ ಬೆಂಗಳೂರು. ವಿಶ್ವ ಹಿಂದೂ ಪರಿಷತ್ತಿನ ಮಹಿಳಾ ಸಮ್ಮೇಳನ, ಕನ್ನಡ ಸಾಹಿತ್ಯ ಪರಿಷತ್ತು, ಪಾಂಡವಪುರ.

ಕನ್ನಡ ಸಾಹಿತ್ಯ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕರ್ನಾಟಕ ಸರ್ಕಾರ 2002ರಲ್ಲಿ ತ್ರಿವೇಣಿ ನೆನಪಿನ ಕಾರ್ಯಕ್ರಮ, ಬೆಂಗಳೂರು ರಸ್ತೆ ಸಾರಿಗೆ ಸಂಸ್ಥೆ ಉದ್ಘಾಟನೆ ಮತ್ತಿತರ ಸಾಹಿತ್ಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ.

ಆರ್ಯಾಂಬ ಅವರು ಬರೆದಿರುವ ಅನೇಕ ವಿಚಾರ ಲೇಖನಗಳಾದ ಆರೋಗ್ಯ, ಸೌಂದರ್ಯ, ಅತಿಮಿತಿ, ಈ ದುಬಾರಿ ಏಕೆ, ಕುದುರೆ ಬಾಲದ ಹಿಂದೆ ಟೆನಿಸ್ ಉಗಮ ಮತ್ತು ವಿಕಾಸ, ಸಾಹಿತ್ಯ - ನನ್ನ ದೃಷ್ಟಿಯಲ್ಲಿ, ಮಹಾಪುರುಷರ ದೃಷ್ಟಿಯಲ್ಲಿ ಮಹಿಳೆ, ಮಕರ ಸಂಕ್ರಾಂತಿ, ಇಂದಿನ ಬದುಕಿಗೆ ಶ್ರೀ ಬಸವೇಶ್ವರರ ಮೌಲ್ಯಗಳು, ಮಹಿಳೆ ಮತ್ತು ಮೂಢನಂಬಿಕೆ, ಯೋಗಾಭ್ಯಾಸ, ಮಹಿಳಾ ವಯಸ್ಕರ ಶಿಕ್ಷಣ, ಭಾವಾತೀತ ಧ್ಯಾನ, ವರದಕ್ಷಿಣೆ, ವಿವಾಹ ವಿಚ್ಛೇದನ ಮುಂತಾದವು ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ಆಕಾಶವಾಣಿಯಲ್ಲಿ ಇವರ ಅನೇಕ ಕಾರ್ಯಕ್ರಮಗಳು ಪ್ರಸಾರಗೊಂಡಿವೆ. ಅವುಗಳಲ್ಲಿ ಚಿಂತನೆಗಳು, ಕಥೆಗಳು, ನಾಟಕಗಳು, ವಿಚಾರಗೋಷ್ಠಿಗಳು ಮತ್ತು ಆಗಸ್ಟ್ 1997 ರಿಂದ ವಾರಕ್ಕೊಂದು ಕಥೆಯಂತೆ 13 ಕಥೆಗಳು ಪ್ರಸಾರವಾಗಿವೆ. 28 ಡಿಸೆಂಬರ್ 2012ರಲ್ಲಿ ಒಂದು ಘಂಟೆ ಬದುಕು-ಸಾಧನೆ ಬಗ್ಗೆ ಸಂದರ್ಶನ ಹಾಗೂ ಹಲವಾರು ರಾಷ್ಟ್ರೀಯ, ರಾಜ್ಯ, ಜಿಲ್ಲಾ, ತಾಲ್ಲೂಕು ಮಟ್ಟದ ಸಾಹಿತ್ಯ ಸಮ್ಮೇಳನ ಹಾಗೂ ಗೋಷ್ಠಿಗಳಲ್ಲಿ ಪ್ರಬಂಧ ಮಂಡನೆ ಮಾಡಿದ್ದಾರೆ.

ಆರ್ಯಾಂಬರವರು 'ಪೂರ್ಣಿಮ ಪ್ರಕಾಶನ' ಮೈಸೂರು ಇದರ ಮಾಲೀಕರು, ಮಹಿಳಾ ಧ್ಯಾನ ವಿದ್ಯಾಪೀಠದ ಅಧ್ಯಕ್ಷರು ಮತ್ತು ಯೋಗ ಶಿಕ್ಷಕಿ. 'ಸಿ.ಎನ್. ಜಯಲಕ್ಷ್ಮಿದೇವಿ ಟ್ರಸ್ಟ್' ಎಂಬ ವಿದ್ಯಾಸಂಸ್ಥೆಯ ಸ್ಥಾಪಕ ಸದಸ್ಯರು, ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇದರ ಅಜೀವ ಸದಸ್ಯರು ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಚೆಸ್ ಕ್ರೀಡಾಪಟು, ವಿಶ್ವದ ನಾಣ್ಯಗಳು,

ಅಂಚೆ ಚೀಟಿಗಳ ಸಂಗ್ರಹ, ಪ್ರತ್ಯಕ್ಷ, ಪರೋಕ್ಷವಾಗಿ ಅನೇಕ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಸೇವಾ ಸಂಸ್ಥೆಗಳ ಸಂಪರ್ಕಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ದುಡಿಯುವುದು ಇವರ ಹವ್ಯಾಸಗಳಾಗಿವೆ.

ಪ್ರಸುತ್ತ ಇವರು 'ಸಂಕಲ್ಪ ಮಣಿಮಂದಿರ್' ದಿವಾನ್ಸ್ ರಸ್ತೆ, ಲಕ್ಷ್ಮೀಪುರಂ ಮೈಸೂರಿನಲ್ಲಿ ನೆಲೆಸಿದ್ದು, ಇವರ ಇಬ್ಬರು ಮಕ್ಕಳು ಸಾಫ್ಟ್‌ವೇರ್ ಇಂಜಿನಿಯರುಗಳಾಗಿದ್ದು ಹೊರದೇಶದಲ್ಲಿ ನೆಲೆಸಿದ್ದಾರೆ. ಆರ್ಯಾಂಬ ಅವರ ಸಾಹಿತ್ಯದ ಮೇಲೆ ಹಲವಾರು ಸಂಶೋಧನಾ ಪ್ರಬಂಧಗಳು ಬಂದಿದ್ದರೂ ಅವರ ಕಥಾ ಸಾಹಿತ್ಯವನ್ನು ಕುರಿತು ಹೆಚ್ಚು ಚರ್ಚಿಸದಿರುವುದರಿಂದ ಈ ನನ್ನ ಪ್ರಬಂಧದ ವಸ್ತುವಾಗಿ ಆಯ್ಕೆ ಮಾಡಿಕೊಂಡು ಚರ್ಚೆ ನಡೆಸಿದ್ದೇನೆ. ಅವರ ಕಥಾ ಸಾಹಿತ್ಯದ ಭಾವಸಮೃದ್ಧಿ, ವಿಷಯ ಸಮೃದ್ಧಿ, ಕೌಟಿಂಬಿಕ ಚಿತ್ರಣ, ಮಾನವೀಯ ಸಂಬಂಧಗಳನ್ನು, ಆಧುನಿಕ ಧೋರಣೆಯುಳ್ಳ ನೆಲೆಗಳಲ್ಲಿ ಅವರ ಕಥಾ ಸಾಹಿತ್ಯವನ್ನು ಸಂಶೋಧನೆಗೆ ಒಳಪಡಿಸಿ ವಿವೇಚಿಸುವ, ವಿಮರ್ಶಿಸುವ ಕಾರ್ಯವನ್ನು ಈ ಪ್ರಬಂಧದಲ್ಲಿ ಮಾಡಲು ಪ್ರಯತ್ನಿಸಿದ್ದೇನೆ.

* * *

## ಅಧ್ಯಾಯ - ೩

# ಕನ್ನಡ ಸಣ್ಣಕಥೆಗಳ ಹಿನ್ನೆಲೆ

ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಲ್ಲಿ ಸಣ್ಣಕಥೆಯೂ ಒಂದು. ಅದರ ಹೆಸರೇ ಸೂಚಿಸುವಂತೆ 'ಸಣ್ಣಕಥೆಯ' ಪರಿಕಲ್ಪನೆಯೂ ಆಕರ್ಷಣೀಯವಾದದ್ದು. 'ಕಥೆ' ಎಂದರೇನು ಎನ್ನುವುದು ಸ್ಪಷ್ಟವಾಗದೇ ಸಣ್ಣಕತೆಯ ಸ್ವರೂಪ ತಿಳಿಯುವುದಿಲ್ಲ. 'ಕಥೆ' ಕೂಡ ಕಥನ ಸಾಹಿತ್ಯದ ಒಂದು ಪ್ರಕಾರವಾದುದರಿಂದ 'ಕಥೆ'ಯ ವ್ಯಾಖ್ಯೆಯು ನಮಗೆ ಅಗತ್ಯವಾಗುತ್ತದೆ. ಕನ್ನಡ ಸಣ್ಣಕಥೆಗೆ ಪ್ರೇರಣೆ ಪಶ್ಚಿಮದಿಂದ ದೊರೆತಿರುವುದು ನಿಜವಾದರೂ, ಅದರ ಬೇರುಗಳು ಭಾರತೀಯ ಕಥನ ಪರಂಪರೆಯಲ್ಲಿರುವುದರಿಂದ ಸಣ್ಣ ಕಥೆಯನ್ನು ಕುರಿತ ಪಾಶ್ಚಿಮಾತ್ಯ ಕಲ್ಪನೆಗಳು ನಮಗೆ ಪ್ರಸ್ತುತವಲ್ಲ. ಉದಾಹರಣೆಗೆ "ಸಣ್ಣಕಥೆ ತನ್ನ ಸ್ವರೂಪದಲ್ಲಿ ಜನಾಂಗದಿಂದ ಜನಸಮುದಾಯದಿಂದ ದೂರವಾದದ್ದು"[1] ಎನ್ನುವ ಫ್ರಾಂಕ್ ಓಕೋನರರ ಹೇಳಿಕೆಯನ್ನೇ ನೋಡಬಹುದು. ಮೌಖಿಕ ಪರಂಪರೆಯಲ್ಲಿಯೇ ಬೆಳೆದು ಬಂದ ಕನ್ನಡ ಸಣ್ಣಕತೆಯ ಸಂದರ್ಭದಲ್ಲಿ ಈ ಹೇಳಿಕೆ ಅಸಂಬದ್ಧವಾಗಿ ತೋರಿದರೆ ಆಶ್ಚರ್ಯವೇನಿಲ್ಲ.

ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಅನಂತರದ ಜನಪ್ರಿಯತೆ ಸ್ಥಾನವನ್ನು ಸಣ್ಣಕತೆಯು ಪಡೆದುಕೊಂಡಿದೆ ಎಂಬುದು ಸತ್ಯವಾದ ಮಾತು. ದಿನಪತ್ರಿಕೆ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಸಣ್ಣಕತೆಗಳು ಹುಟ್ಟುತ್ತಲೇ ಇವೆ. ಯಾವುದೇ ಕಾಲಘಟ್ಟದಲ್ಲಾದರೂ ಸಣ್ಣಕತೆಗಳು ಸಮೃದ್ಧಿಯನ್ನು ಹೊಂದಿವೆ. ಮೊದಮೊದಲು ಈ ಹೊಸ ಸಾಹಿತ್ಯ ಪ್ರಕಾರದ ಬಗ್ಗೆ ನಮ್ಮ ಲೇಖಕರು ಬಹಳ

---

1. ಜಿ.ಎಸ್.ಅಮೂರರ ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ಪು.೨೦

ಉತ್ಸಾಹವನ್ನು ತಳೆದಿದ್ದರು. ಇದರಿಂದ 1920 ಹಾಗೂ 1930 ರ ಕಾಲದಲ್ಲಿ ಬಂದ ಕಥೆಗಳಲ್ಲಿ ಕಥೆಗಾರರ ವಿಶಿಷ್ಟ ಕ್ರಮವನ್ನು ಕಾಣಬಹುದಾಗಿದೆ. ವಿಷಯದ ಆಯ್ಕೆ ಅದರ ನಿರೂಪಣೆಯಲ್ಲಿ ತುಂಬಾ ಚಿಂತನೆ ನಡೆಸಿರುವುದು ಅಧ್ಯಯನದಿಂದ ತಿಳಿದಿರುತ್ತೇನೆ. ಆದರೆ ಇಂದಿನ ಕಥೆಗಳಲ್ಲಿ ಅಂತಹ ಅಂಶಗಳು ವಿರಳವಾಗಿವೆ ಎಂದು ಹೇಳಿದರೆ ತಪ್ಪಾಗಲಾರದು.

ಮಾಸ್ತಿ ವೆಂಕಟೇಶ್ ಐಯ್ಯಂಗಾರ್‌ರಂತೆ ಸಣ್ಣಕತೆಯನ್ನು ತಮ್ಮ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಂಡ ಕಥೆಗಾರರು ಅನಂತರ ಕಂಡು ಬರಲಿಲ್ಲ. ಈಗ ಬರೆಯುತ್ತಿರುವ ಕಥೆಗಳಲ್ಲಿ ಅಂತಹ ಅಂತಸತ್ವವಿರುವ ಕಥೆಗಳು ಕಂಡುಬರುತ್ತಿಲ್ಲವೆಂದರೆ ತಪ್ಪೇನು ಇಲ್ಲ. ಸಣ್ಣಕಥೆ ಕಥನದ ಒಂದು ಪ್ರಕಾರವಾದುದರಿಂದ ಹಾಗೂ ಕಥನದ ಚರ್ಚೆಯ ನೆಲೆಯಿಂದಲೇ ಸಣ್ಣಕಥೆ ಸ್ವರೂಪ ಜಿಜ್ಞಾಸೆಗೆ ಹೊರಡುವುದು ಸೂಕ್ತವೆನಿಸಿದುದರಿಂದ ಕಥನ ಸಾಹಿತ್ಯದ ವ್ಯಾಪ್ತಿ ಹಾಗೂ ಕಥನದ ವ್ಯಾಖ್ಯೆಗಳನ್ನು ವಿವರಿಸಬೇಕಾಗಿದೆ.

ಸಣ್ಣಕತೆ ಎಂಬ ಪದ ಪ್ರಯೋಗ ಇಂಗ್ಲೀಷ್‌ನ Short Storyಯ ಭಾಷಾಂತರವಾಗಿಯೇ ಕನ್ನಡದಲ್ಲಿ ಪ್ರಚಲಿತವಾಗಿದೆ. ಮರಾಠಿಯಲ್ಲಿ ಸಣ್ಣ ಕಥೆಯನ್ನು 'ಕಥಾ' ಎಂದೇ ಗುರುತಿಸಲಾಗುತ್ತದೆ. ಆದರೆ Short ಶಬ್ದದ ಅರ್ಥ ವ್ಯಾಪ್ತಿಗೂ ಸಣ್ಣ ಪದದ ಅರ್ಥ ವ್ಯಾಪ್ತಿಗೂ ಅಂತರಗಳಿವೆ. "OXFORD DICTIONARY" 'SHORT' ಪದಕ್ಕೆ ಕೊಡುವ ಪ್ರಧಾನ ಅರ್ಥ ಹೀಗಿದೆ -

1. Measuring little from end to end in space or time.

2. Not Reaching the usual stated or required.

3. Saying very little or Saying much in few words Short Story ಈ ಅರ್ಥಗಳನ್ನು ಅನ್ವಯಿಸಿದಾಗ ಸೂಚಿತವಾಗುವ ಅಂಶಗಳೆಂದರೆ -

1. ಸಣ್ಣಕತೆ ಸ್ಥಳ, ಕಾಲಗಳನ್ನು ತೀರ ಚಿಕ್ಕ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುತ್ತದೆ.

2. ಅದು ಅಪೇಕ್ಷಿತ ಅಥವಾ ನಿರೀಕ್ಷಕ ಮಿತಿಗಳನ್ನು ತಲುಪುವುದಿಲ್ಲ.

3. ಅದು ಹೇಳುವುದು ಬಹಳ ಕಡಿಮೆ ಅಥವಾ ಸ್ವಲ್ಪದರದಲ್ಲಿಯೇ ಅದು ಬಹಳಷ್ಟನ್ನು ಹೇಳುತ್ತದೆ.

ಕನ್ನಡದಲ್ಲಿ ಸಣ್ಣ ಎನ್ನುವ ಪದಕ್ಕೆ ಕಿಟ್ಟೆಲ್ ಡಿಕ್ಸನರಿಯಲ್ಲಿ Small, little, tiny, minute, thin, delicate, slender, narrow, insignificant ಇವುಗಳು Small ಎಂಬುದೊಂದು ಬಿಟ್ಟರೆ ಯಾವ ಅರ್ಥವು ಸಣ್ಣ ಕಥೆಗೆ ಅನ್ವಯಿಸುವುದಿಲ್ಲ. Short ಎಂದಾಗ Long ಶಬ್ದ ಸೂಚಕವಾದಂತೆ ಸಣ್ಣ ಎಂಬುದು 'ದೊಡ್ಡ' ಎಂಬುದರ ವಿರುದ್ಧಾರ್ಥವಾಗಿದೆ. ಠಾಗೂರ್‌ರ ಕವಿತೆಗಳ ಬಗ್ಗೆ ಇಂತಹ ಸಮಸ್ಯೆಯನ್ನೆದುರಿಸಿದ ವಿಲಿಯಂ ರ್‍ಯಾಡಿಸ್ Short ಎಂಬ ಪದಕ್ಕಿಂತ Brief ಎನ್ನುವ ಪದ ಹೆಚ್ಚು ಸಮರ್ಪಕವಾದುದು ಎಂದು ಅಭಿಪ್ರಾಯ ಪಡುತ್ತಾನೆ. 'What is short story? ಎಂಬ ತಮ್ಮ ಲೇಖನದಲ್ಲಿ ಅಲೆಕ್ಸಿ, ಟಾಲ್‌ಸ್ಟಾಯ್ Brevityಯಂಥ ಪದಗಳನ್ನು ಬಳಸಿರುವುದನ್ನು ಗಮನಿಸಬಹುದು.

ಕಥನ ಸಾಹಿತ್ಯಕ್ಕೆ ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ತನ್ನದೇ ಆದ ಸ್ಥಾನವನ್ನು ನೀಡಿದೆ ಮತ್ತು ಕಥಾ ಸಾಹಿತ್ಯ ಇಲ್ಲಿ ದೊರೆತ ಪ್ರಮಾಣದಷ್ಟು ಬೇರೆಲ್ಲೂ ಸಿಗಲಾರದು. ವೇದ ಉಪನಿಷತ್ತುಗಳಲ್ಲಿ ಬರುವ ಕತೆಗಳು ಭಾಗವತ ಮೊದಲಾದ ಪುರಾಣಗಳಲ್ಲಿ ಕಂಡು ಬರುವಷ್ಟು, ರಾಮಾಯಣ ಮಹಾಭಾರತದಂಥ ಇತಿಹಾಸ ಕಾವ್ಯಗಳು, 'ರಘುವಂಶ'ದಂಥ ಮಹಾಕಾವ್ಯಗಳು 'ಪಂಚತಂತ್ರ' ಹಿತೋಪದೇಶಗಳಂತಹ ನೀತಿಕಥೆಗಳಿಂದ, ಕಥಾಸರಿತ್ಸಾಗರ, ಹರಿಕಥೆಗಳು, ಜಾನಪದ ಕಥೆಗಳು, ಜಾತಕ ಕಥೆಗಳು, ಜೈನಕಥಾಸಾಹಿತ್ಯ, ಭಾರತದ ಎಲ್ಲ ಭಾಷೆಗಳಲ್ಲೂ ದೊರೆಯುವ ಜಾನಪದ ಕಥೆಗಳು ಹೀಗೆ ಕಥೆಯ ಪ್ರಪಂಚದ ವಿಸ್ತಾರ ವಿವರವಿದೆ.

ಇವೆಲ್ಲ ಕಥೆಯ ಬೇರೆ ಬೇರೆ ಮಾದರಿಗಳಾದ್ದರಿಂದ ಈ ಕಥನ ಪ್ರಪಂಚ ವಿಸ್ತಾರದೊಂದಿಗೆ ವೈವಿಧ್ಯವನ್ನು ಹೊಂದಿದೆ.

ಭಾರತೀಯ ಕಥನ ಸಾಹಿತ್ಯದ ಉದ್ದೇಶ ಎಂದೂ ಕೇವಲ ಮನರಂಜನೆಯೊಂದೇ ಆಗಿರಲಿಲ್ಲ. ವೇದವ್ಯಾಸ ಮಹರ್ಷಿಯೇ ಸೂಚಿಸಿದಂತೆ, ಮಹಾಭಾರತ, ರಾಮಾಯಾಣಗಳಂತಹ ಇತಿಹಾಸಗಳಲ್ಲಿ ಹಾಗೂ ಪುರಾಣಗಳಲ್ಲಿ ವೇದದ ಜ್ಞಾನವೇ ಅಡಗಿದೆ ಎಂಬುದಾಗಿ ಹೇಳಿದ್ದಾರೆ. ಕೆ. ಭುಜಬಲಶಾಸ್ತ್ರಿಗಳು ಜೈನಕಥೆಗಳ ಬಗ್ಗೆ ಹೇಳುತ್ತಾ "ಜೈನ ಕಥೆಗಳು ಶುದ್ಧ ಭಾರತೀಯ ಕಥೆಗಳಾಗಿದ್ದು ಪರ್ಯಾಪ್ತ ಸಂಖ್ಯೆಯಲ್ಲಿ ಪೂರ್ಣಮೌಲಿಕವಾಗಿರುವುವು. ಅಲ್ಲದೆ ಜೈನ ಕಥಾಕಾರನು ಲೀಲಾಜಾಲವಾಗಿ ತನ್ನ ರೋಚಕ ಶೈಲಿಯಲ್ಲಿ ಹೇಳುತ್ತಾ ಹೋಗುತ್ತಾನೆ. ಪ್ರತಿಯೊಂದು ಕತೆಯ ಕೊನೆಯಲ್ಲಿ ಪ್ರಸಂಗದ ತತ್ತ್ವದ ಪ್ರದರ್ಶನ ಅಥವಾ ಪುಣ್ಯದ ಸುಫಲ ಹಾಗೂ ಪಾಪದ ಕುಫಲದ ಕಡೆ ಸಂಕೇತ ಮಾತ್ರ ಇದ್ದೇ ಇರುತ್ತದೆ. ಕತೆಯಿಂದ ಯಾವುದಾದರೊಂದು ನಿಷ್ಕರ್ಷವನ್ನು ಕಡೆದು ಕಥಾಕಾರನು ಪ್ರಸ್ತುತ ಕಥೆಯು ಇಂತಹ ಒಂದು ಧಾರ್ಮಿಕ ಮಾನ್ಯತೆ ಅಥವಾ ಸಿದ್ಧಾಂತಕ್ಕೆ ಇವು ದೃಷ್ಟಾಂತವಾಗಿವೆಯೆಂದು ಸೂಚಿಸುತ್ತಾನೆ" ಇದನ್ನು ಎಂದು ವಿವರಿಸಿದ್ದಾರೆ.

ಕಥೆಗಳ ಮೇಲೆ ಬಹಳ ಪ್ರಭಾವ ಬೀರಿದ್ದು ಜಾನಪದ ಕತೆಗಳು ಬರಹಕ್ಕಿಳಿಸಿದಾಗ ತಮ್ಮ ಸತ್ವವನ್ನು ಕೆಲಮಟ್ಟಿಗೆ ಕಳೆದುಕೊಳ್ಳುತ್ತವೆ. ಆದರೂ ಅವು ಭಾರತೀಯ ಪ್ರತಿಭೆಯ ಶ್ರೇಷ್ಠ ನಿದರ್ಶನಗಳಾಗಿವೆ ಎಂಬುದನ್ನು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಜಾನಪದ ಸಾಹಿತ್ಯದ ಪ್ರಸ್ತುತತೆಯನ್ನು ಕುರಿತು "ಜಿ. ಎನ್.ದೇವಿ ಹೇಳುವ ಮಾತು ಹೀಗಿವೆ. "ಭಾರತೀಯ ಸಾಹಿತ್ಯ ಕಳೆದ ಎರಡು ಶತಮಾನಗಳಲ್ಲಿ ಪಾಶ್ಚಾತ್ಯ ಮೂಲದ 'Prespecitve' ಕಲ್ಪನೆಯ ಭಾರದಲ್ಲಿ ನರಳಿದೆ. ಪಾಶ್ಚಾತ್ಯ ಜ್ಞಾನಮಾರ್ಗಗಳು ನಮ್ಮ ಜ್ಞಾನಮಾರ್ಗಗಳ ಸ್ಥಾನವನ್ನು ಆಕ್ರಮಿಸಿಕೊಂಡಿರುವುದರಿಂದ ಆದಿವಾಸಿ ಕಲ್ಪನೆಯೊಂದೇ ವಸಾಹತು ಚಿಂತನಾಕ್ರಮದಿಂದ ಮುಕ್ತವಾಗಿ ಉಳಿದಿದೆ.

ಭಾರತೀಯ ಕಥನಗಳ ಪಾರಂಪರಿಕ ಉದ್ದೇಶಗಳನ್ನು ವಿದ್ಯಾನಿವಾಸ ಮಿಶ್ರರು ಹೀಗೆ ವಿವರಿಸುತ್ತಾರೆ[1] -

1. ಆಶಯ ಆಕೃತಿಗಳ ಸಾಂಗತ್ಯದ ಮೂಲಕ ಬದುಕಿನ ಸಮಗ್ರತೆಯ ದರ್ಶನ

2. ದೈಹಿಕ, ಮಾನಸಿಕ ಹಾಗೂ ವಾಚಕ ಕ್ರಿಯೆಗಳ ಏಕೀಕರಣದಿಂದ ಭಾಗಗಳನ್ನು ಇಡಿಯಾದುದರಲ್ಲಿ ಮತ್ತೆ ಸೇರಿಸುವುದು.

3. ಮನುಷ್ಯನ ಸಮಸ್ಯೆಗಳಿಗೆ ಸಮುದಾಯದ ನೆಲೆಯಲ್ಲಿ ಹಾಗೂ ಸಮುದಾಯದ ಪ್ರಯತ್ನದಿಂದ ಪರಿಹಾರ ಕಂಡು ಹಿಡಿಯುವುದು.

4. ಸಂಸಾರದ ಸುಖದುಃಖಗಳಲ್ಲಿ ಆಸೆ, ಆದರ್ಶಗಳಲ್ಲಿ ತೊಡಗಿಸಿಕೊಂಡು ಮಾನವೀಯ ಸಂಬಂಧಗಳ ಚಿತ್ರಣಗಳ ಮೂಲಕ ಅವುಗಳನ್ನು ಮುಂದಿನ ಪೀಳಿಗೆಗೆ ತಲುಪಿಸಿ ಬಿಡುಗಡೆ ಪಡೆಯುವುದು.

ಕನ್ನಡದ ಸಣ್ಣಕತೆಗಾರರಿಗೆ ಇಷ್ಟು ದೊಡ್ಡ ಪರಂಪರೆ ಬಳುವಳಿಯಾಗಿ ಬಂದಿರುವಾಗ ಅದನ್ನು ಅವರು ಅಲಕ್ಷಿಸಿರುವ ಸಾಧ್ಯತೆಯಲ್ಲಿ. ಮೊದಮೊದಲು ಕತೆಗಾರರಂತೂ ಈ ನೆನಪುಗಳನ್ನು ಸ್ಪಷ್ಟವಾಗಿ ಉಳಿಸಿಕೊಂಡು ಬಂದರು. ಉದಾ :- ಆನಂದಕಂದರು ಜಾನಪದ ಪರಂಪರೆಯನ್ನು ವಿವರಿಸುವುದನ್ನು ಗಮನಿಸಬಹುದು. "ನಮ್ಮ ಜಾನಪದ ಪರಂಪರೆಯಲ್ಲಿ ಕಥೆಯ ಸಾಹಿತ್ಯ ರಾಶಿರಾಶಿಯಾಗಿ ಸಿಕ್ಕುವುದು."[2] ಅಜ್ಜಿಯ ಕತೆಗಳನ್ನು ಮೊದಲು ಮಾಡಿ ವೇದಾಂತ ತತ್ವವನ್ನು ಬೋಧಿಸುವ ಪೌರಾಣಿಕ ಕಥೆಗಳವರೆಗೆ ಕಥಾ ಜಾತಿಯ ವಿವಿಧ ಸ್ವರೂಪಗಳು ಇದರಲ್ಲಿ ನೋಡಲು ದೊರೆಯುವುವು.

---

1. ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ಜಿ.ಎಸ್.ಅಮೂರ, ಪು. ೨೧
2. ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ಜಿ.ಎಸ್.ಅಮೂರ, ಪು. ೨೧

ವ್ಯಕ್ತಿವ್ಯಕ್ತಿಗಳ ಸ್ವಭಾವಗಳನ್ನು ಸಾಮಾನ್ಯ ಸಮಾಜ ಜೀವನವನ್ನು ಅಣಕಿಸಿ ತೋರಿಸುವ ಚುಟುಕ, ಕತೆಗಳ ತ್ಯಾಗವೀರರನ್ನು, ಧರ್ಮವೀರರನ್ನು, ಯುದ್ಧವೀರರನ್ನು ಬಣ್ಣಿಸುವ ಪವಾಡ ಕತೆಗಳಿರುವವು. ಶೃಂಗಾರ ಸರಸಿಗಳಾದ ರಾಜ-ರಾಣಿಯರ ಸರಸ-ರಂಜಕ ಕತೆಗಳೂ ಇರುವವು. ಇವುಗಳಲ್ಲಿ ಹಲವು ಕತೆಗಳು ಅರಳಿಕೆಯನ್ನು ಅಲ್ಲದೆ ಹೋದರು ಮೂಲ ಸ್ವರೂಪದಲ್ಲಿ ಆಧುನಿಕ ಸಣ್ಣಕತೆಗಳ ತಂತ್ರಕ್ಕೆ ಹೊಂದುವಂತಹವುಗಳಾಗಿವೆ.

ಸಣ್ಣಕತೆಯನ್ನು ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಸ್ವೀಕರಿಸಬೇಕೇ ಎನ್ನುವ ವಿಷಯದಲ್ಲೂ, ವಾದಗಳಿವೆ. ವ್ಯಾಲೆಂಶಾಳ ಪ್ರಕಾರ[1] "ಅದೊಂದು 'ಬೆರಿಕೆ'ಯ ಸಾಹಿತ್ಯ ಪ್ರಕಾರ." ಈ ಹೇಳಿಕೆ ಕೂಡ ಪ್ರೀಡಮನನ ಹೇಳಿಕೆಗೆ ಹತ್ತಿರವಾಗಿ ನಿಲ್ಲುತ್ತದೆ ಹಾಗೂ ಸಮರ್ಥಿಸುತ್ತದೆ.

ಸಣ್ಣಕತೆಯ ವಿಶಿಷ್ಟ ಗುಣವೆಂದರೆ ಮಿತವ್ಯಯ, ತೀವ್ರತೆ ಸ್ಪಷ್ಟತೆಗಳ ಮೂಲ 'ಸಣ್ಣತನ'ದಲ್ಲಿಯೇ ಇದೆ. ಕಾದಂಬರಿಗೆ ಹೋಲಿಸಿದರೆ ಸಣ್ಣಕತೆಯಲ್ಲಿ ಕ್ರಿಯೆ ಸೀಮಿತವಾಗಿರುತ್ತದೆ. ವಿ.ಎಸ್.ಪ್ರಿಚೆಟ್ ವಿವರಿಸುವಂತೆ "ಕಾದಂಬರಿ ಎಲ್ಲವನ್ನು ಹೇಳುತ್ತದೆ. ಆದರೆ ಸಣ್ಣಕತೆ ಒಂದನ್ನು ಮಾತ್ರ ಹೇಳುತ್ತದೆ. ಆದರೆ ಈ ಹೇಳಿಕೆಯಲ್ಲಿ ತೀವ್ರತೆ ಇರುತ್ತದೆ. "ಸಣ್ಣಕಥೆ ಒಂದು ಚಿತ್ರವಾಗಿರುತ್ತದೆ, ಆದರೆ ಹಿಂದೆ ಒಂದು ವಿಚಾರವಿರುತ್ತದೆ. ಅದು ತನ್ನ ವಿಷಯದ ಸತ್ಯವನ್ನು ನಿದರ್ಶಿಸುತ್ತದೆ" ಎಂದು ಹೆನ್ರಿ ಜೇಮ್ಸ್ ಹೇಳುವುದು ಇದನ್ನೇ ಸೂಚಿಸುತ್ತದೆ.

ಸಣ್ಣ ಕತೆಯ ಬಗ್ಗೆ ಹೆಸರಾಂತ ಅಮೇರಿಕನ್ ಕತೆಗಾರ್ತಿ ಯುಡೋರ ವೆಲ್ಟಿಯೂ ಅಭಿಪ್ರಾಯದಲ್ಲಿ ಸಣ್ಣಕತೆಯ ಸಂವಿಧಾನವನ್ನು ನಿಯಂತ್ರಿಸುವ ಎರಡು ಅಂಶಗಳೆಂದರೆ -

1. ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ಜಿ.ಎಸ್.ಅಮೂರ, ಪು. ೨೧

1. ಬದುಕು ಸಾವುಗಳ ವೈರುದ್ಯ

2. ಅನ್ವೇಷಣೆ ಅಥವಾ ಹುಡುಕಾಟ

"ದಿ ಲೋನ್ಲಿ ವಾಯ್ಸ್" ಎಂಬ ತನ್ನ ಗ್ರಂಥದಲ್ಲಿ ಫ್ರ್ಯಾಂಕ್ ಓಕಾನರ್ ಸಣ್ಣಕತೆಗಳ ಪಾತ್ರಗಳು ಹೆಚ್ಚಾಗಿ ಬದುಕಿನಲ್ಲಿ ಬಲಿಪಶುಗಳಾದ ವ್ಯಕ್ತಿಗಳ ನೋವು ಅವಮಾನ, ಏಕಾಂಗಿತನ ಹಾಗೂ ಪರಕೀಯತೆಯನ್ನು ಕುರಿತು ಚಿತ್ರಿಸುವಂತಹವು ಎಂದು ಹೇಳುತ್ತಾರೆ. ಆದರೆ ಕತೆಗಳ ಎಲ್ಲ ಅಂಶಗಳನ್ನು ಗಮನಿಸಿದಾಗ ಕಾದಂಬರಿಯಂತೆ ಸಣ್ಣ ಕತೆ ಕೂಡ ಮೊತ್ತದಲ್ಲಿ ಬದುಕಿನ ಸಮಗ್ರತೆಯನ್ನು ಒಳಗೊಳ್ಳುವುದರಿಂದ ಮನುಷ್ಯನ ಸಂತೋಷ, ಗೆಲವು ಮುಂತಾದ ಅಂಶಗಳು ಕೂಡ ಅದರ ವಿಷಯಗಳಾಗ ಬಲ್ಲವು ಎಂಬುದನ್ನು ಗಮನಿಸಬಹುದು.

ಸಣ್ಣಕತೆಯಲ್ಲಿ ಕಾಲಕ್ಕೆ ವಿಶೇಷವಾದ ಮಹತ್ವವಿದೆ. ಕಾರ್ತಜೂರ ಅದನ್ನು ಕಾಲದ ಜೊತೆಗೆ ನಡೆದ ಸ್ಪರ್ಧೆ ಎಂದೇ ಕರೆದಿದ್ದಾನೆ. ಸಣ್ಣ ಕತೆ ಹಾಗೂ ಕಾದಂಬರಿಗಳ ನಡುವಿನ ಅಂತರವನ್ನು ಗುರುತಿಸಲು ಕಾಲ ಒಂದು ಮಹತ್ವದ ಸೂಚಕವಾಗಿದೆ. ಕಾದಂಬರಿ ಎಪಿಕ್ ಪ್ರಕಾರಕ್ಕೆ ಹತ್ತಿರವಾದುದರಿಂದ ಅದು ವಾಸ್ತವ ಕಾಲವನ್ನು ಹೆಚ್ಚಿನ ಪ್ರಮಾಣದಲ್ಲಿ ಒಳಗೊಳ್ಳುತ್ತದೆ.

ಸಣ್ಣ ಕತೆಯು ಬಗ್ಗೆ ವಿವಿಧ ವಿದ್ವಾಂಸರು ಹೇಳಿದ ಅಂಶಗಳನ್ನು ಈ ರೀತಿ ಗಮನಿಸುವುದರ ಜೊತೆಗೆ ಈ ಪ್ರಕಾರವನ್ನು ಕುರಿತು ಕನ್ನಡದ ಲೇಖಕರ ಅಭಿಪ್ರಾಯಗಳನ್ನು ಈ ರೀತಿಯಾಗಿ ಗಮನಿಸಬಹುದಾಗಿದೆ. ಅಂದರೆ ಕನ್ನಡದಲ್ಲಿ ಕೂಡ ಈ ಪ್ರಕಾರದ ಬಗ್ಗೆ ತಕ್ಕ ಮಟ್ಟಿನ ಚರ್ಚೆ ನಡೆದಿರುವುದನ್ನು ಗಮನಿಸಬಹುದು. ವರಕವಿ ಬೇಂದ್ರೆಯವರು ಬರೆದಿದ್ದು ಕೆಲವೇ ಕಥೆಗಳಾದರೂ ಕತೆಗಳ ಸ್ವರೂಪದ ಬಗ್ಗೆ ಈ ರೀತಿ ಹೇಳಿದ್ದಾರೆ.

1. "ಸಣ್ಣ ಕತೆಗಳು ಭಾವಗೀತಗಳಿದ್ದಂತೆ" ಎಂದು ಹೇಳುವವರು ಅವುಗಳ ಜೀವಕ್ಕೆ ಸಂಬಂಧಿಸಿದ್ದು, ದೇಹಕ್ಕಲ್ಲ ಅಂದರೆ ಭಾವಗೀತೆ ಪದ್ಯ, ಕತೆ, ಗದ್ಯ.

2. ಕತೆಗೆ ಸ್ವಯಂಭೂಶಕ್ತಿ ಇರುತ್ತದೆ ; ಕತೆಗಾರ ಅದಕ್ಕೆ ಭಂಗ ತರಬಾರದು. ಕತೆಯ ಸ್ವಾಯತ್ತತೆಗೆ ಭಂಗ ಬರದಂತೆ ಕತೆಗಾರನ ಪ್ರತಿಭೆ ದುಡಿಯಬೇಕು.

"ಜೀವನದ ವಾಸ್ತವದ ಹಾಗೆಯೇ ರಸವತ್ತಾದ ಚಿತ್ರಗಳನ್ನು ಕೊಡುವುದಷ್ಟೆ ನನ್ನ ಕೆಲಸ" ಎಂದು ಮಾಸ್ತಿಯವರು ಸಣ್ಣಕತೆಯ ವಾಸ್ತವ ಆಯಾಮವನ್ನೇ ತೋರಿಸಿದರೂ ಬೇರೆ ಕತೆಗಾರ ಕತೆಗಳಿಗೆ ಬರೆದ ಮುನ್ನುಡಿಗಳಲ್ಲಿಯೂ ಅವರು ಈ ಕತೆಗಳಲ್ಲಿ ನಾಡಿನ ಜನರ ಜೀವನ ಮೂಡಿಬಂದುದನ್ನೇ ಹೆಚ್ಚು ಮೆಚ್ಚಿಕೊಂಡರು. ಕತೆಗಾರರಾಗಿ ತಮ್ಮ ಅನುಭವವನ್ನು ವಿವರಿಸುತ್ತ ಅವರು ಕತೆಗಳಿಂದ ತಮಗೆ ದೊರೆತ ಆನಂದದ ಮೂಲ 'ಬೇರೆ ಜೀವನವನ್ನು ಅರಿತು ಅವರ ಜೊತೆ ಸೇರುವುದರಲ್ಲಿದೆ ಎಂದು ಹೇಳಿದರು.

ದ.ರಾ.ಬೇಂದ್ರೆಯವರು ಕಥೆಗಳನ್ನು ಭಾವಗೀತಕ್ಕೆ ಹೋಲಿಸಿದರೆ ಚಿತ್ತಾಲರು ಸಣ್ಣಕತೆಯನ್ನು ಕಾವ್ಯಕ್ಕೆ ಹೋಲಿಸಿದ್ದಾರೆ. ಒಂದು ಕವನಕ್ಕೂ ಒಂದು ಸಣ್ಣಕತೆಗೂ ಮೂಲತಃ ಯಾವ ವ್ಯತ್ಯಾಸವೂ ಇಲ್ಲ, ವ್ಯತ್ಯಾಸವಿರುವುದು ಅವುಗಳ ಸಂಯೋಜನೆಯಲ್ಲಿ ಸಾಧನದಲ್ಲಿ ನಿರೂಪಣಾ ಮಾರ್ಗದಲ್ಲಿ ಸಾಹಿತ್ಯದಲ್ಲಿ ಕಾವ್ಯ, ನಾಟಕ, ಕಾದಂಬರಿ ಮುಂತಾದ ಅನೇಕ ಪ್ರಕಾರಗಳಿದ್ದರೂ ಅವೆಲ್ಲಕ್ಕೂ ಸಾಮಾನ್ಯವಾದ ಗುಣ ಅತ್ಯಗತ್ಯ.

ಕಥೆ ಹೇಳುವುದಾಗಲಿ ಕೇಳುವುದಾಗಲಿ ಬಹಳ ಪ್ರಾಚೀನವಾದುದಾಗಿದೆ. ಮಾನವ ಮಾತನಾಡುವುದನ್ನು ಕಲಿತಾಗಲೇ ಕಥೆಯ ಅಂಕುರಾರ್ಪಣವೂ ಆಗಿರಬೇಕೆಂದು ತೋರುತ್ತದೆ. ಭಾರತ ದೇಶದ ಮಟ್ಟಿಗೆ ಹೇಳುವುದಾದರೆ ಕಥೆ ಬಹುಪ್ರಾಚೀನ ಕಾಲದಿಂದಲೂ ಇಲ್ಲಿ ಅಸ್ಥಿತ್ವದಲ್ಲಿರುವುದನ್ನು

ನೋಡುತ್ತೇವೆ. ವೇದಗಳಲ್ಲಿ ಕಂಡು ಬರುವ ಇಂದ್ರ, ವೃತ್ರಾಸುರರ ಕಥೆಗಳು, ಪುರೂರವ, ಊರ್ವಶಿ ಮುಂತಾದವರ ಕಥೆಗಳು, ಐತರೇಯ, ತೈತರೀಯ ಬ್ರಾಹ್ಮಣದ ಹರಿಶ್ಚಂದ್ರನ ಕಥೆ, ಕಠೋಪನಿಷತ್ತಿನಲ್ಲಿರುವ 'ನಚೀಕೇತೋಪಾಖ್ಯಾನ' ಮೊದಲಾದವು ಸೊಗಸಾದ ಕಥೆಗಳಾಗಿವೆ. ಬ್ರಾಹ್ಮಣ, ಉಪನಿಷತ್, ರಾಮಾಯಣ ಮಹಾಭಾರತ ಬೃಹತ್ಕಥಾ ಇವೇ ಮೊದಲಾದವುಗಳು ಅಪಾರ ಕಥಾ ಸಂಪತ್ತಿನಿಂದ ಕೂಡಿದವುಗಳಾಗಿವೆ. ಗೌತಮಬುದ್ಧ ಧರ್ಮಬೋಧನೆಯನ್ನು ಸುಲಭವಾಗಿ ಜನತೆಗೆ ಮುಟ್ಟಿಸಲು ಕಥೆಗಳನ್ನು ಆಶ್ರಯಿಸುತ್ತಾನೆ. ಇವು ಮುಂದೆ ಜಾತಕ ಕಥೆಗಳೆಂದು ಪ್ರಸಿದ್ಧವಾಗುತ್ತವೆ. ಇಷ್ಟುಮಾತ್ರವಲ್ಲ ಜೈನರ ಅರವತ್ಮೂರು ಶಲಾಕಾಪುರುಷರ ಕಥೆಗಳು ಸಮೃದ್ಧವಾಗಿ ಹರಡಿವೆ. ವಾಕ್ ಸಂಪ್ರದಾಯದಲ್ಲೂ ಹರಿದು ಬಂದಿರುವ ಕಥಾಪರಂಪರೆಯೊಂದನ್ನೇ ಜನಪದದಲ್ಲಿ ನೋಡಬಹುದಾಗಿದೆ.

ಇಂದಿನ ಮನರಂಜನಾ ಸವಲತ್ತುಗಳಿಲ್ಲದ ಕಾಲದಲ್ಲಿ ಜನರಿಗೆ ಕಥೆಗಳೇ ಪ್ರಮುಖ ಮನರಂಜನಾ ಸಾಧನವಾಗಿದ್ದವು. ಋಷಿಗಳು ಆಧ್ಯಾತ್ಮವನ್ನು ವಿದ್ಯಾಪ್ರಸಾರಕ್ಕೆ ಕಥಾಸಾಧನವನ್ನು ಬಳಸಿಕೊಂಡಂತೆ ಕನ್ನಡನಾಡಿನ ತಾಯಂದಿರು ಕಥೆಗಳ ಮೂಲಕ ತಮ್ಮ ಮಕ್ಕಳ ಮನಸ್ಸನ್ನು ಬೆಳಸಿ ತಿದ್ದುತ್ತಿದ್ದರು. ಸಮಸ್ಯೆಗಳನ್ನು ಪೃಥಕರಿಸಿ ಬೇಕಾದಾಗ ತತ್ವದರ್ಶನ, ಕಲಾವಿಜ್ಞಾನಗಳನ್ನು ಬೋಧಿಸಬೇಕಾದಾಗ ಕಥೆಯ ಮನರಂಜಕ ಸಾಧನ ಕನ್ನಡಿಗರಿಗೆ ನೆರವಾಗುತ್ತಿತ್ತು. ಸಾಹಿತ್ಯ ಪ್ರಪಂಚದಲ್ಲಿ ಮಾತ್ರವೇ ಅಲ್ಲದೇ ದರ್ಶನ, ತತ್ವ, ವಿಜ್ಞಾನ ಪ್ರಪಂಚದಲ್ಲಿಯೂ ಕಥನಕಲೆ ಬಹಳ ಪ್ರಸಿದ್ಧಿಯಾಗಿದೆ.

ಬೈಬಲ್, ಕುರಾನ್, ಉಪನಿಷತ್ತುಗಳಲ್ಲಿ ಇದರ ಉಪಯೋಗ ಕಂಡುಬಂದಿರುವುದಲ್ಲದೆ, ಪರ್ಶಿಯಾ, ಅರೇಬಿಯಾ ದೇಶಗಳ ಸೂಫಿ ತತ್ವಜ್ಞರು ಕಥೆಯ ಮೂಲಕವೇ ತಮ್ಮ ವಿಚಾರಗಳನ್ನು ಪ್ರತಿಪಾದಿಸುವ ಪರಿಪಾಠವನ್ನಿಟ್ಟುಕೊಂಡಿದ್ದರು. ನಮ್ಮ ಹಳಗನ್ನಡ ಸಾಹಿತ್ಯದ ಹಲವು ಕೃತಿಗಳು

ಕಥೆಗಳಿಗಾಗಿ ಕಥೆಗಳಿಗಾಗಿಯೇ ಮೀಸಲಾಗಿರುವುದನ್ನು ನೋಡುತ್ತೇವೆ. ದುರ್ವನೀತನು ಪೈಶಾಚಿ ಭಾಷೆಯಲ್ಲಿದ್ದ 'ಗುಣಾಢ್ಯನ ಬೃಹತ್ಕಥೆ'ಯನ್ನು ಕನ್ನಡಕ್ಕೆ ಅನುವಾದಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸದ್ಯಕ್ಕೆ ಉಪಲಬ್ಧವನ್ನು ಮೊಟ್ಟಮೊದಲ ಕನ್ನಡ ಕಥಾಸಂಗ್ರಹವೆಂದರೆ ಕ್ರಿ.ಶ. ಸುಮಾರು 920ರಲ್ಲಿ ಶಿವಕೋಟಾಚಾರ್ಯರಿಂದ ರಚಿಸಲ್ಪಟ್ಟ ವಡ್ಡಾರಾಧನೆ. ಇದರಲ್ಲಿ ಹತ್ತೊಂಬತ್ತು ಧಾರ್ಮಿಕ ಕಥೆಗಳಿವೆ. ಇದರ 'ನಯಸೇನನ ಧರ್ಮಾಮೃತ, ದುರ್ಗಸಿಂಹನ ಪಂಚತಂತ್ರ, ವೃತ್ತವಿಲಾಸನ ಧರ್ಮಪರೀಕ್ಷೆ ಮುಂತಾದ ಕಥಾಸಂಕಲನಗಳನ್ನು ನಾವು ಕಾಣಬಹುದು.

ಆಧುನಿಕ ಕಥಾಪ್ರಕಾರದ ಹುಟ್ಟನ್ನು ಪಾಶ್ಚಾತ್ಯ ದೇಶಗಳಲ್ಲಿ ಅರಸಬೇಕೆಂದೇನು ಇಲ್ಲ. ಆದರೆ ಇಂದು ನಾವು ಆಧುನಿಕ ಸಣ್ಣ ಕಥಾ ಪ್ರಕಾರದಲ್ಲಿ ನೋಡುವ ವೈವಿಧ್ಯಮಯವಾದ ಆಯಾಮಗಳ ಮೇಲೆ ಪಾಶ್ಚಾತ್ಯ ಸಾಹಿತ್ಯದ ದಟ್ಟ ಪ್ರಭಾವ ಉಂಟು ಮಾಡಿರುವ ಪರಿಣಾಮವನ್ನು ನಾವು ಅಲ್ಲಗಳೆಯುವಂತಿಲ್ಲ. ಒಟ್ಟಿನಲ್ಲಿ ಈ ಸಂಬಂಧವಾಗಿ ಡಾ. ಗಿರಡ್ಡಿ ಗೋವಿಂದರಾಜ ಅವರು ವ್ಯಕ್ತಪಡಿಸುವುದೇನೆಂದರೆ[1] "ಕನ್ನಡದಲ್ಲಿ ಹೊಸದಾಗಿ ಆರಂಭವಾದ ಸಣ್ಣಕತೆ ಪಶ್ಚಿಮದ ದೇಶಗಳಲ್ಲಿ ಆಗಲೇ ಸಿದ್ಧವಾಗಿದ್ದ ರೂಪದ ಪ್ರಭಾವದಿಂದಾಗಿಯೇ ನಮ್ಮಲ್ಲಿ ಬಂದಿತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ" ಎಂದಿದ್ದಾರೆ.

ಸಣ್ಣಕಥೆಯೂ ನಮಗೆ ಹೊಸದಲ್ಲವೆಂದೂ 'ಕಥಾಸರಿತ್ಸಾಗರ', 'ಪಂಚತಂತ್ರ'ಗಳಂತಹ ಕಥಾಸಂಗ್ರಹಗಳು ನಮ್ಮಲ್ಲಿದ್ದವೆಂದೂ ವಾದಿಸುವ ಕೆಲವರು ಈಗಲೂ ಇದ್ದಾರೆ. ಆದರೆ ಇಂದಿನ ಸಣ್ಣಕಥೆ ನಮ್ಮ ಪ್ರಾಚೀನ ಕಥಾಪರಂಪರೆಯ ಸಹಜ ಬೆಳವಣಿಗೆಯ ಫಲವಲ್ಲ. ಪಶ್ಚಿಮದ ಆಧುನಿಕ ಸಣ್ಣಕತೆಯ ಸಂಪರ್ಕದಲ್ಲಿ ನಾವು ಬಂದಿರದಿದ್ದರೆ ಈಗಿನ ರೂಪದ ಸಣ್ಣಕತೆ ನಮ್ಮಲ್ಲಿ ಹುಟ್ಟುತ್ತಿರಲಿಲ್ಲ

1. ಅ.ನ.ಕೃ., ಸಾಹಿತ್ಯ ಮತ್ತು ಜೀವನ, ಶಾರದಾ ಪ್ರಕಟಸಾಲಯ, 1961, ಪು. 88

ಎಂಬ ಅಂಶವನ್ನು ನಾವಿಲ್ಲಿ ಮರೆಯಬಾರದು. ಆದರೆ ಪಶ್ಚಿಮದ ಸಣ್ಣಕತೆ ನಮ್ಮಲ್ಲಿಗೆ ಬಂದಾಗ ಅದು ಅಲ್ಲಿಯ ಪೂರ್ಣ ಅನುಕರಣೆಯಾಗಿ ನಮ್ಮಲ್ಲಿ ಕತೆಗಳ ಒಂದು ಪರಂಪರೆಯೇ ಇರಲಿಲ್ಲವೆಂಬಂತೆ, ತೀರ ಹೊಸದಾಗಿಯೇ ಬರಲಿಲ್ಲವೆಂಬುದು ಕೂಡ ಅಷ್ಟೇ ಮುಖ್ಯವಾದ ಅಂಶವಾಗಿದೆ.

ಆಧುನಿಕ ಕನ್ನಡ ಸಣ್ಣ ಕಥೆಗಳ ಚರಿತ್ರೆ ಪಂಜೆಮಂಗೇಶರಾಯರಿಂದ ಪ್ರಾರಂಭವಾಯಿತೆನ್ನಬೇಕು. ಭಾರತ ಶ್ರವಣೆ, ಕಮಲಾಪುರದ ಹೋಟೆಲಿನಲ್ಲಿ "ನನ್ನ ಚಿಕ್ಕತಾಯಿ" ಮುಂತಾದ ಕಥೆಗಳನ್ನು ಕ್ರಿ.ಶ. 1900ರಲ್ಲಿ ಪ್ರಕಟಿಸಿದರು. ಅವರ ಕಥೆಗಳ ವಸ್ತು ಸಾಮಾಜಿಕ ಹಾಗೂ ಚಾರಿತ್ರಿಕ. ಅಲ್ಲಿನ ಪಾತ್ರಗಳು ವೀರ ಮತ್ತು ಪ್ರೇಮಕ್ಕೆ ಆದರ್ಶ. ವೀರಮಣಿಯರು ಕಾಣಿಸಿಕೊಳ್ಳುವ ಅವರ ಕಥೆಗಳಲ್ಲಿ ಹಾಸ್ಯಕ್ಕೆ ಪ್ರಧಾನತೆ ಇದೆ. ಆಧುನಿಕ ಜಗತ್ತಿನ ಕಥಾಸಾಹಿತ್ಯವನ್ನು ಭಾರತೀಯ ಪರಪಂರೆಯ ಹಿನ್ನೆಲೆಯಲ್ಲಿ ವಿಕಾಸಗೊಳಿಸುವ ಕೀರ್ತಿ ಕನ್ನಡದ ಆಸ್ತಿ ಮಾಸ್ತಿಯವರಿಗೆ ಸಲ್ಲುತ್ತದೆ. ಹೆಚ್ಚು ಓದುಗರನ್ನು, ಹೆಚ್ಚು ವಿಷಯ ವೈವಿಧ್ಯತೆಯಿಂದ ಆಕರ್ಷಿಸಿದರು. ಆದ್ದರಿಂದ ಮಾಸ್ತಿಯವರು ಕನ್ನಡದ ಸಣ್ಣಕತೆಗಳ ಜನಕರೆಂದು ಕರೆಯುತ್ತಾರೆ. ಅವರ ಕಥಾ ಜಗತ್ತು ವಿಪುಲವೂ ವೈವಿಧ್ಯವೂ ಸರಳ, ನೇರ ನಿರೂಪಣೆಯಿಂದ ಕೂಡಿದೆ. ಇವರ "ಮೊಸರಿನ ಮಂಗಮ್ಮ, ವೆಂಕಟಿಗನ ಹೆಂಡತಿ, ಕಲ್ಮಾಡಿಯ ಕೋಣ ಮುಂತಾದವನ್ನು ಹೆಸರಿಸಬಹುದು.

ಪಂಜೆಮಂಗೇಶರಾಯರು ಸಣ್ಣಕಥೆಗೆ ಮೊದಲಿಗರಾಗಿದ್ದಾರೆ. ಅನಂತರ ಕೆರೂರು ವಾಸುದೇವಾಚಾರ್ಯರು, ಎಂ.ಎನ್.ಕಾಮತ್ ಮುಂತಾದವರು ಈ ಸಾಲಿಗೆ ಸೇರುತ್ತಾರೆ. ಸಣ್ಣಕತೆಯ ಜನಕರೆಂದು ಖ್ಯಾತರಾದ ಶ್ರೀನಿವಾಸರನ್ನು ಬಿಟ್ಟರೆ ಪ್ರಮುಖ ಕಥೆಗಾರರಾಗಿ ಉಳಿಯುವುದು ಆನಂದ. 'ಭವತಿ ಭಿಕ್ಷಾಂ ದೇಹಿ', 'ನಾ ಕೊಂದ ಹುಡುಗಿ' ಮುಂತಾದ ಅವರ ಕಥೆಗಳನ್ನು ಗಮನಿಸಬಹುದು. ಕುವೆಂಪುರವರ ಧನ್ವಂತರಿಯ ಚಿಕಿತ್ಸೆ ಇಂದಿಗೂ ಸಹ ರೈತರ ಸಮಸ್ಯೆಗಳ ದ್ಯೋತಕದಂತಿವೆ. ಕೋಡೆಕಲ್

ಶ್ರೀನಿವಾಸರ "ಧನಿಯರ ಸತ್ಯನಾರಾಯಣ" ಪ್ರಗತಿಶೀಲ ಧೋರಣೆಯನ್ನು ವ್ಯಕ್ತಪಡಿಸುವಂಥದ್ದು. ಪ್ರಗತಿಶೀಲ ಕತೆಗಾರರಲ್ಲಿ ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ ಮುಂತಾದವರು ಸ್ವಾತಂತ್ರಾನಂತರದ ಜೀವನಶೈಲಿಯನ್ನು ಬಿಂಬಿಸುವ ಕತೆಗಳನ್ನು ರಚಿಸಿದ್ದಾರೆ. 'ಶವದ ಮನೆ' ಚದುರಂಗರ ಪ್ರಸಿದ್ಧ ಕತೆ. ಅಂದಿನ ರಾಜಕೀಯ ಬೆಳವಣಿಗೆಯ ಪರಿಣಾಮವನ್ನು ತೋರುವಂತದ್ದು. ಬೆಂಗಳೂರು ಮಹಾನಗರಗಳಲ್ಲಿ ಅಮಾಯಕರು ಒಳಗಾಗುವ ಶೋಷಣೆಯ ಚಿತ್ರಣ ಕೊಡುವ 'ಕೊನೆಯ ಗಿರಾಕಿ' ನಿರಂಜನರ ಯಶಸ್ವಿ ಕತೆಗಳಲ್ಲಿ ಒಂದು ಅ.ನ.ಕೃ. ಅವರು ಸಂಪಾದಿಸಿದ 'ಕಾಮನಬಿಲ್ಲು' ಪ್ರಗತಿಶೀಲ ಮನೋಧರ್ಮದ ಕತೆಗಳನ್ನು ಒಳಗೊಂಡಿದೆ.

ವ್ಯಕ್ತಿ ಕೇಂದ್ರವಾದ ನವ್ಯದಲ್ಲಿ ಅಂತರಂಗದ ತುಡಿತ ದ್ವಂದ್ವಗಳು, ವ್ಯಕ್ತಿ ಮತ್ತು ಪರಿಸರದ ನಡುವಿನ ಬಿರುಕು, ವ್ಯಕ್ತಿಯ ಏಕಾಂಗಿ ಭಾವ, ಪರಕೀಯತೆ, ಅನಾಥಪ್ರಜ್ಞೆ, ಕಾಮದ ಒಳತೋಟಗಳು, ಅತೃಪ್ತಭಾವ, ವಿಷಾದ ಭಾವನೆಗಳು - ನವ್ಯಕತೆಗಳಿಗೆ ಚೌಕಟ್ಟು ಒದಗಿಸಿದ ಅಂಶಗಳು - ಪ್ರಾಯ್ಡನ ಮನೋವೈಜ್ಞಾನಿಕ ವಿಚಾರ ಮಾನವನ ಮನೋಜಗತ್ತಿನ ದರ್ಶನ ಒದಗಿಸಿತು. ಸಂಕೀರ್ಣವೂ ವರ್ಣಮಯವೂ ಆದ ಮನೋಜಗತ್ತನ್ನು ಕುರಿತು ಬರೆಯುವಾಗ ಭಾಷೆ, ವಸ್ತು, ತಂತ್ರಗಳು ಸಂಕೀರ್ಣವಾಗುವುದು ಅನಿವಾರ್ಯವಾಯಿತು.

ಡಿ.ಎಚ್.ಪಿ. ಜೋಶಿರವರ ಕೆಲವು ಕತೆಗಳಲ್ಲಿ ಭಾವ ಪ್ರಭಾವದಲ್ಲಿ ಕತೆಯ ಸೌಂದರ್ಯ ಬಹಳ ಸೊಗಸಾಗಿದೆ. ನವಿಲುಗರಿಯಲ್ಲಿ ಪ್ರಕಟವಾದ ಕಿಚ್ಚಿನ-ಕಾವಲು ಎಂಬ ಕತೆ ಅವರ ಸ್ವಭಾವವನ್ನು ಒಂದೇ ಕಡೆಗೆ ಹಿಡಿದು ತೋರಿಸಿದೆ. 'ಗಂಗೆಯ ಗುತ್ತಿಗೆ' ಎಂಬ ಕತೆಯನ್ನೂ ಬರೆದ ಟೇಂಗ್ಸ್ ಗೋವಿಂದರಾಯರು ಮುಂದೆ ಸಣ್ಣಕತೆಗಳನ್ನು ಬರೆಯದೇ ಇದ್ದದ್ದು ಸಾಹಿತ್ಯ ಲೋಕಕ್ಕೆ ಒಂದು ಸೋಜಿಗವಾಗಿದೆ. ಗಂಗೆಯ ಗುತ್ತಿಗೆ 'ಧಪ್ಪರ್ ಬಂದ್' ಈ ಎರಡು ಕತೆ ಅವರ ಪ್ರತಿಭೆಯ

ಪ್ರತೀಕವಾಗಿದೆ. ಮುಗುಳಿಯವರ 'ಕನಸಿನ ಕೆಳದಿ' ನಿಧಾನವಾಗಿ ಪ್ರಕಟಣೆಗೊಂಡರೂ ಅವರು ಇದೇ ತಲೆಮಾರಿಗೆ ಸೇರಿದವರಾಗಿದ್ದಾರೆ.

ರಮಾನಂದರಾಯರು, ಗೊರೂರು ರಾಮಸ್ವಾಮಿ ಐಯ್ಯಾಂಗಾರ್‌ರ ಕತೆಗಳನ್ನು ಪ್ರತ್ಯೇಕವಾಗಿ ನೋಡಬೇಕು. ಇಬ್ಬರೂ ಹಾಸ್ಯ ವ್ಯಕ್ತಿಗಳಾದರೂ ಅವರ ಹಾಸ್ಯದಲ್ಲೇ ಕಥಾಂಶವಿದೆ. 'ಹುಚ್ಚು ಬೆಳದಿಂಗಳಿನ ಹೂಬಾಣಗಳು' ಎಂಬ ಕಥಾಸಂಗ್ರಹದಲ್ಲಿ ಕೆಲವು ಲೇಖನಗಳೇ ಕಥೆಗಳ ಗುಣಲಕ್ಷಣಗಳನ್ನು ಹೊಂದಿವೆ. ಕೊಡಗಿನ ಗೌರಮ್ಮನವರು ಮೊದಲು ಲೇಖಕಿ ಎಂಬಂತೆ ಮೊದಲ ಕತೆಗಾರ್ತಿಯಾಗಿದ್ದಾರೆ. ಹೆಣ್ಣಿನ ಬಾಳಿನ ದುಃಖ ದುಮ್ಮಾನಗಳನ್ನು ತೊಡಕು ತೊಂದರೆಗಳನ್ನು ಚಿತ್ರಿಸಿದ್ದಾರೆ. ಕಂಬನಿ, ಮರದ ಬೊಂಬೆ, ಹೂಬಿಸಿಲು, ಹೊಂಬಿಸಿಲು ಇತ್ಯಾದಿ ಕಥಾಸಂಗ್ರಹಗಳನ್ನು ನೋಡಬಹುದು.

ದೇವುಡು ಅವರು ಶ್ರೇಷ್ಠ ಕತೆಗಾರರು. ಅವರ ವೈಣಿಕ, ಸೋಲೋ ಗೆಲುವೋ ನೀಳ್ಗತೆಗಳು ಪ್ರಮುಖ ಕೃತಿಗಳು. ಬೇಂದ್ರೆಯವರ ಕತೆಗಳು ಪು.ತಿ.ನ., ಕುವೆಂಪುರವರ ಕತೆಗಳು ರವೀಂದ್ರರ ಕತೆಯನ್ನು ಅನುಸರಿಸಿ ಬಂದವಾಗಿವೆ. ಕಥಾಸಂಗ್ರಹಗಳಾದ ನನ್ನ ದೇವರು ಮತ್ತು ಇತರ ಕತೆಗಳು ಹಾಗೂ ಸನ್ಯಾಸಿ ಮತ್ತು ಇತರ ಕತೆಗಳು ಎಂಬ ಕಥಾಸಂಗ್ರಹವನ್ನು ಕಾಣಬಹುದಾಗಿದೆ. ವಿ.ಸೀ.ರವರ ಹುಚ್ಚು ಹಂಬಲ ಕೆ.ಶಂಕರಭಟ್ಟರ ಅದ್ದಿದ್ದು, ಜಡಭರತರ ಜೋಗಜ್ಜನ ಬಹಿಷ್ಕಾರ, ಭಾರತಿ ಪ್ರಿಯರ 'ವೀಣೆ' ಹಾಗೂ 'ಒಂದು ಹಳೆಯ ಕತೆ' ಇವು ಕನ್ನಡ ಜನತೆ ಮರೆಯಲಾರದ ಕತೆಗಳು, ಸೇಡಿಯಪ್ಪು ಕೃಷ್ಣಭಟ್ಟರ ಕತೆಗಳ ಸ್ವರೂಪ ವಡ್ಡಾರಾಧನೆ ಕತೆಗಳ ಸ್ವರೂಪಕ್ಕೆ ಕಸಿಮಾಡಿದಂತಾಗಿದೆ.

ಪ್ರಗತಿಶೀಲರ ದೃಷ್ಟಿಯಿಂದ ಹಳೆಯ ಸಾಹಿತ್ಯವೆಲ್ಲಾ ಬೂರ್ಜ ಸಾಹಿತ್ಯವಾಯಿತು. ಇಂಥ ವಾದಗಳಿಗೆ ಆಕರ್ಷಿತರಾದ ತರುಣ ಬರಹಗಾರರನೇಕರು ಕೇವಲ ಮನೋಧರ್ಮದ ಕಾವಿನಿಂದಲೇ

ಸಾಹಿತ್ಯ ರಂಗಕ್ಕಿಳಿದರು. ಅ.ನ.ಕೃ.ರವರು ಪ್ರಗತಿಶೀಲ ಕತೆಗಾರರಾದರೂ ಅವರ ಕತೆಯು ಸಂಪೂರ್ಣವಾಗಿ ಪ್ರಗತಿಶೀಲವಾದುದ್ದಲ್ಲ. ಅವರ ಕತೆಗಳಲ್ಲಿ ಬಡತನ ಸಾಮಾಜಿಕ ವಿಷಮತೆ, ರಾಜಕೀಯ ವಸ್ತು ಕತೆಯ ವಿಷಯಗಳಾಗಿವೆ. ನಿರಂಜನ, ತ.ರಾ.ಸು. ರಂಥವರು ಕಥಾ ಲೇಖನವನ್ನು ಬಿಟ್ಟು ಕಾದಂಬರಿಗೆ ಗಂಟುಬಿದ್ದರು. ತ.ರಾ.ಸು. ಹೆಚ್ಚು ಕತೆಗಳನ್ನು ಬರೆದಿದ್ದಾರೆ. ಗಿರಿಮಲ್ಲಿಗೆಯ ನಂದನದಲ್ಲಿ ರಾಜಾ ಸಾಹೇಬ ಎಂಬ ಕಥಾ ಸಂಗ್ರಹವನ್ನು ಕಾಣಬಹುದು.

ಬಸವರಾಜ ಕಟ್ಟೀಮನಿಯವ ಕಾರವಾನ್, ಕಥಾ ಸಂಕಲನ ಹಾಗೂ ಜೀವನ ಕಲೆ ಬಣ್ಣದ ಬುಗ್ಗೆ, ಗಿರಿಜಾ ಕಂಡ ಸಿನಿಮಾ ಕತೆಗಳು ಬಡತನ, ಡಾಂಭಿಕತೆ ಈ ಕತೆಗಳಲ್ಲಿವೆ. ಅನುಪಮ ನಿರಂಜನರ 'ಕೊನೆಯ ಗಿರಾಕಿ' ಪ್ರಸಿದ್ಧ ಕತೆಯಾಗಿದೆ. ಕೋ.ಚೆನ್ನಬಸಪ್ಪನವರ ಗಡೀಪಾರು ಹಾಗೂ ನಮ್ಮೂರಿನ ದೀಪ ಇವರ ಕಥಾ ಸಂಗ್ರಹ ಉಂಗುರದ ಉರುಳು, ಪರಿಣಾಮಕಾರಿಯಾದ ಕತೆಗಳಾಗಿವೆ.

ವ್ಯಾಸರಾಯರ ಬಲ್ಲಾಳರ ಸಂಪಿಗೆ ಹೂ, ನಿವೃತ್ತಿ, ಭಾವಬಂಧನ, ಕೆಪು ಬತ್ತಿ ಇವು ಇವರ ಕತೆಗಳಾಗಿವೆ. ಮುಂಬಯಿ ಸುಶಿಕ್ಷಿತ ಹಲವಾರು ಸಮಸ್ಯೆಗಳನ್ನು ಇವರ ಕತೆಗಳಲ್ಲಿ ಕಾಣಬಹುದು. ದ.ಬಾ. ಕುಲಕರ್ಣಿ ಲೇಡಿ ಟೈಪಿಸ್ಟ್, ಕಪ್ಪು ಹುಡುಗಿ, ಜಾಗೀರಿಯ ದಿಂಬುರವರ ಕತೆಗಳಲ್ಲಿ ಜೀವನವನ್ನು ವಾಸ್ತವದಲ್ಲೆ ಸೌಂದರ್ಯವನ್ನು ಕಾಣಬಹುದು. ಜೀ.ಶಂ.ಪರಮಶಿವಯ್ಯನವರ ಕಾವಲುಗಾರ ಒಂದೇ ಒಂದು ಸಂಗ್ರಹವಾಗಿದೆ. ಯಶವಂತ ಚಿತ್ತಾಲರ ಸಂದರ್ಶನ, ಶ್ರೀನಾರಂಗಿ ಭಟ್ಟರ ದಕ್ಷಿಣ ಧ್ರುವ, ನಕ್ಕಾಗ ಪ್ರಮುಖ ಕತೆಗಳಾಗಿವೆ. ನಮ್ಮ ಕವಿಗಳೆಂದು ಪ್ರಸಿದ್ಧರಾದ ರಾಮಚಂದ್ರಶರ್ಮರ ಏಳನೆಯ ಜೀವ, ಸೆರಗಿನ ಕೆಂಡ ಸಂಗಮ ಪ್ರಮುಖ ಕತೆಗಳಾಗಿವೆ.

ಯು.ಆರ್.ಅನಂತಮೂರ್ತಿರವರ ಎಂದೆಂದಿಗೂ ಮುಗಿಯದ ಕತೆ, ತಾಯಿ, ಹುಲಿಯ ಹೆಂಗರುಳು ಇವರ ಕಥಾವಸ್ತು ಪ್ರಗತಿಶೀಲತೆಯದೇ ಆಗಿದೆ. ಶಾಂತಿನಾಥ ದೇಸಾಯಿಯ ಮಂಜುಗೆಡ್ಡೆ

ವಸ್ತುವಿನ ದೃಷ್ಟಿಯಿಂದ ನವ್ಯವಾಗಿವೆ. ಚಂದೂ ಕತೆಗಳು, ಪ್ರಮುಖವಾಗಿವೆ. ಹೀಗೆ ನವ್ಯಕತೆ ಅದರ ಜೊತೆಗೆ ಬಂದ ಆಧುನಿಕ ಕತೆಗಳ ಬರವಣಿಗೆ ಸಾಗಿದೆ. ಲಂಕೇಶ ಕೊ.ಮ.ಸೀತಾರಾಮ, ಗೋವಿಂದ ಮೂರ್ತಿ, ದೇವನೂರುರವರು ಪ್ರಮುಖ ಕತೆಗಾರರು ಇದ್ದಾರೆ. ಹೊಸಬರಲ್ಲಿ ಅನೇಕ ಪ್ರತಿಭಾವಂತ ಕತೆಗಾರರು ಇದ್ದಾರೆ. "ಇಷ್ಟಾದರೂ ಕನ್ನಡಕ್ಕೆ ರಕ್ತದಾನ ಮಾಡಬಲ್ಲಂಥ ಸಮರ್ಥ ಲೇಖಕನೊಬ್ಬ ಬರಬೇಕಾಗಿದೆ" ಎಂದು ಕೀರ್ತಿನಾಥರು ಹೇಳಿದ್ದಾರೆ.

ಭಾರತೀಯ ಪರಪಂರೆಯಲ್ಲಿ ಕತೆಗೆ ನಾಟಕಕ್ಕಿದ್ದಂತೆ ದೈವನೆಲೆಯನ್ನು ಕಲ್ಪಿಸಲಾಗಿದೆ. ಕಳೆದ ಆರು ದಶಕದಲ್ಲಿ ಮಹಿಳಾ ಕಥಾ ಸಾಹಿತ್ಯಕ್ಕೂ ಒಂದು ಪರಂಪರೆ ಇದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡದೆ ಪತ್ನಿ, ವಿಧವೆ, ವೇಶ್ಯ ಆಗಿ ಗುರುತಿಸಿಕೊಂಡಿದ್ದರು. ಅನಂತರ ಮಹಿಳೆಯರೆಲ್ಲಾ ಕ್ರಾಂತಿಕಾರಕ ಬೆಳವಣಿಗೆ ಕಂಡು ಬಂದರು. ಈ ಪೀಳಿಗೆಯ ಪ್ರಮುಖ ಲೇಖಕಿಯರೆಂದರೆ ಅನುಪಮ ನಿರಂಜನ, ತ್ರಿವೇಣಿ, ರಾಜಲಕ್ಷ್ಮಿ, ಎನ್. ರಾವ್ ಹಾಗೂ ವೀಣಾರ ಕತೆಗಳು ನಾವು ನೋಡುವ ಅಂತರಮುಖತೆಯ ಆವಿಷ್ಕಾರಗಳು.

ಅನುಪಮ ನಿರಂಜನ ವೈದೇಹಿ ಸಾರಾ ಅಬೂಬಕರ್, ನೇಮಿಚಂದ್ರ, ಗೌರಮ್ಮ, ಶ್ಯಾಮಲಾ ದೇವಿ, ಬಿ.ಟಿ.ಲಲಿತಾನಾಯಕ್, ವೀಣಾ ಶಾಂತೇಶ್ವರ, ಎಂ.ಎಸ್.ವೇದಾ ಪ್ರಮುಖ ಕತೆಗಾರ್ತಿಯರಾಗಿ ಕಂಡು ಬರುತ್ತಾರೆ. ಸ್ತ್ರೀ ನೆಲೆಯಲ್ಲಿ ಸ್ತ್ರೀ ಶೋಷಣೆಯನ್ನೂ ಇವರ ಕತೆಗಳಲ್ಲಿ ಕಾಣಬಹುದಾಗಿದೆ.

ಆಧುನಿಕ ಕನ್ನಡ ಕಥನ ಸಾಹಿತ್ಯವನ್ನು ಒಟ್ಟಾಗಿ ನೋದಿದಾಗ ಹೊಳೆಯುವ ಪ್ರಮುಖ ಸಂಗತಿ ಏನೆಂದರೆ ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಾರಂಭವಾದ ಸಂಪ್ರದಾಯ ಮತ್ತು ಆಧುನಿಕತೆಗಳ ಮುಖಾಮುಖಿಯ ಪ್ರಕ್ರಿಯೆ ಕೊನೆಗೊಂಡಿಲ್ಲ. ಬಾಗಲೋಡಿ ದೇವರಾಯರ ಹುಚ್ಚು ಮುನ್ಸಿಫರ್ ಚರಿತ್ರೆ, ದೇಸಾಯಿಯವರ ಕ್ಷಿತಿಜ, ಅನಂತಮೂರ್ತಿಯವರ ಸೂರ್ಯ ಕುದುರೆ, ತೇಜಸ್ವಿಯವರ

ಮಾಯಾಮೃಗ ಇವುಗಳಲ್ಲಿ ಸಾಂಸ್ಕೃತಿಕ ಆಯಾಮವನ್ನು ನೋಡಬಹುದು. ಲಂಕೇಶರ ರೊಟ್ಟಿ ಸಾಮಾಜಿಕ ಪ್ರಜ್ಞೆ ಕೆಲಸ ಮಾಡುತ್ತದೆ. ಯಶವಂತರ ಸೆರೆ ಆಟ, ಕತೆಯಾದಳು ಹುಡುಗಿ, ಬೆಸಗರಹಳ್ಳಿ ರಾಮಣ್ಣನವರ 'ಕಕರನ ಯುಗಾದಿ' ಬರಗೂರು ರಾಮಚಂದ್ರಪ್ಪನವರ ಜನಪದ, ದೇವನೂರರ ದ್ಯಾವನೂರು ಕಥಾಸಂಕಲನ ಕುರಿ.ವೀ. ರವರ ಕತೆಗಳು ಪ್ರತಿಭಟನೆಯ ಅಂಶಗಳನ್ನಾಗಿ ಒಳಗೊಂಡಿದೆ.

ಸತ್ಯನಾರಾಯಣರು, ಬಲ್ಲಾಳ, ಸೋಹಿತ ನಾಯ್ಕರ್, ಡಿ.ಎಚ್. ಲಾರೆನ್ಸ್‌ರ ಕತೆಗಳು, ಜಯಂತ ಕಾಯ್ಕಿಣಿ, ರಾಘವೇಂದ್ರ ಖಾಸನೀಸರು, ವಿ.ಬಿ. ರಾಘವ, ಸದಾಶಿವ ಆಧುನಿಕ ಕಾಲದ ಪ್ರಮುಖ ಕತೆಗಾರರಾಗಿದ್ದಾರೆ. ಹೀಗೆ ಸಣ್ಣ ಕತೆಗಳ ಪರಂಪರೆಯು ಹೊಸತೊಂದು ಹಾದಿಯೊಂದು ಸೃಷ್ಟಿಗೊಂಡಿದ್ದು ಆಧುನಿಕ, ಪ್ರಗತಿಪರ, ವಿಚಾರಶೀಲ ಕತೆಗಳನ್ನೂ ಇಂದು ಕಾಣಬಹುದಾಗಿದೆ.

ಆಧುನಿಕ ಕಥಾಗಾರರ ಕತೆಗಳಲ್ಲಿ ವಿದ್ಯೆ, ಜಾತಿ, ಅಂತರ್ಜಾತಿ ವಿವಾಹ, ವಿಧವಾ ವಿವಾಹ, ಬಾಲ್ಯವಿವಾಹ, ಬಡವ ಬಲ್ಲಿದ ಮುಂತಾದ ವಸ್ತು ವಿಷಯಗಳಿಂದ ಪ್ರಮುಖ ಸ್ಥಾನ ಪಡೆದಿರುವುದು ಈ ಅಧ್ಯಯನದ ಸಂದರ್ಭದಲ್ಲಿ ನಾನು ಗುರುತಿಸಿ ಕೊಂಡಿದ್ದೇನೆ. ಒಟ್ಟಿನಲ್ಲಿ ಕನ್ನಡ ಕಥಾ ಸಾಹಿತ್ಯದ ಹಿನ್ನೆಲೆಯನ್ನು ಗಮನಿಸಿದಾಗ ಕಾಲದಿಂದ ಕಾಲಕ್ಕೆ ಬದಲಾದ ವಿಷಯ ವೈವಿಧ್ಯ, ವಿವಿಧ ಬಗ್ಗೆಯ ಧೋರಣೆಗಳನ್ನು ಗುರುತಿಸಬಹುದಾಗಿದೆ.

* * *

## ಅಧ್ಯಾಯ - ೪

# ಆರ್ಯಾಂಬ ಪಟ್ಟಾಭಿ ಅವರ ಕಥಾ ಸಂಕಲನಗಳಲ್ಲಿ ಕೌಟುಂಬಿಕ ಚಿತ್ರಣ ವಿಶ್ಲೇಷಣೆ

ಕನ್ನಡ ವಾಙ್ಮಯದಲ್ಲಿ ಗದ್ಯ ಲೇಖಕಿ ಎಂದೇ ಪ್ರಸಿದ್ಧರಾದ ಆರ್ಯಾಂಬ ಪಟ್ಟಾಭಿ ಅವರು ಆಧುನಿಕ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಆಧುನಿಕ ಸಾಹಿತ್ಯದಲ್ಲಿ ಸಣ್ಣಕಥೆ ಚಿಗುರು ಹೂವಿದ್ದಂತೆ, ಅದಿಲ್ಲದೆ ವೃಕ್ಷ ಬೆಳೆಯಲಾರದು. ಸಣ್ಣಕತೆ ಸಾಹಿತ್ಯ ಪ್ರಕಾರದಲ್ಲೆ ಅತ್ಯಂತ ಸೂಕ್ಷ್ಮವಾದ ರಚನೆ. ಅಂದರೆ ಇಲ್ಲಿಯ ಬಂಧ ಬಹಳ ಪ್ರಮುಖವಾದುದ್ದು, ಕನ್ನಡ ಸಾಹಿತ್ಯದ ಪ್ರಾರಂಭದಿಂದಲೇ ಕತೆ ವಿಶಿಷ್ಟ ಜನಪ್ರಿಯತೆ ಹಾಗೂ ಸ್ಥಾನ ಗಳಿಸಿ ಸಣ್ಣ ತೊರೆಯಂತೆ ಹೊರಟು ಇಂದು ಹಳ್ಳಕೊಳ್ಳಗಳನ್ನು ತುಂಬಿ ಸಾಗರದಂತೆ ಉಕ್ಕಿ ಹರಿಯುತ್ತಿದೆ. ಇದರಲ್ಲಿ ಅನೇಕ ಅನರ್ಘ್ಯ ಮುತ್ತು ರತ್ನಗಳು ಕಂಗೊಳಿಸುತ್ತಿವೆ. ಇಂತಹ ಅನರ್ಘ್ಯ ರತ್ನಗಳಲ್ಲಿ ಆರ್ಯಾಂಬ ಪಟ್ಟಾಭಿ ಅವರು ಒಬ್ಬರು.

ಕತೆ ಹೇಳುವುದು, ಕೇಳುವುದು ಹಿಂದಿನಿಂದಲೂ ಪ್ರಿಯವಾದ ವಿಷಯ. ಕಥನ ಕಲೆ ಇಂದಿನದಲ್ಲ, ಪುರಾತನವಾದದ್ದು. ಅನೇಕ ಲೇಖಕ ಲೇಖಕಿಯರು ಸಣ್ಣಕತೆಯ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ್ದಾರೆ. ನವೋದಯ ಕಾಲದಲ್ಲಿ ಕತೆಗಳು ಲೇಖಕರನ್ನು ಒಲಿಸಿಕೊಂಡಂತೆ ಸಾಹಿತ್ಯದ ಯಾವ ಪ್ರಕಾರವೂ ಒಲಿಸಿಕೊಳ್ಳಲಿಲ್ಲ. ಅಸಂಖ್ಯಾತ ಕಥಾಸಂಕಲನಗಳೂ ಬೆಳಕು ಕಂಡಿವೆ. ಕೆಲವರಂತೂ ಕತೆಯನ್ನೇ ತಮ್ಮ ಅಭಿವ್ಯಕ್ತಿಯ ವಿಶಿಷ್ಟ ಮಾಧ್ಯಮವನ್ನಾಗಿ ರೂಪಿಸಿಕೊಂಡಿದ್ದಾರೆ. ಕಥಾ ರಚನೆಯಲ್ಲಿ

ಹೆಸರು ಮಾಡಿರುವ ಹಿರಿಯರಂತೆ ಇದೀಗ ಉದಯೋನ್ಮುಖ ಬರಹಗಾರರೂ ಹೊಸ ರೀತಿ, ಹೊಸ ಶೈಲಿ, ಹೊಸ ತಂತ್ರದ ಕತೆಗಳನ್ನು ಬರೆದು ಓದುಗರ ಗಮನ ಸೆಳೆಯುತ್ತಿದ್ದಾರೆ.

ಇತ್ತೀಚೆಗೆ ಹೆಚ್ಚಿನ ಸಂಖ್ಯೆಯಲ್ಲಿ ಸಣ್ಣಕತೆಗಳು ಬೆಳಕಿಗೆ ಬರುತ್ತಿವೆ. ಅದಕ್ಕೆ ಕಾರಣ ದೈನಿಕ ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಿಂದ ಬರುತ್ತಿರುವ ಬೇಡಿಕೆ. ಓದುಗರನ್ನು ಆದರಿಸಿ ಪ್ರಕಟಗೊಳ್ಳುತ್ತಿರುವ ಪತ್ರಿಕೆಗಳು ಅವರ ಮೆಚ್ಚುಗೆ ಪಡೆಯಲು ಸಣ್ಣಕತೆಗಳನ್ನು ಹೆಚ್ಚಾಗಿ ಪ್ರಕಟಿಸುತ್ತಿವೆ. ಸಣ್ಣಕತೆಯ ರಚನೆಯ ಕಲಾತ್ಮಕತೆಯುಳ್ಳದು. ಅದು ಕತೆಯಲ್ಲಿ ಹೊರಹೊಮ್ಮಬೇಕು. ಹಾಗಾದರೆ ಮಾತ್ರ ಅವುಗಳ ಸಾರ್ಥಕತೆ ಕಂಡು ಬರುವುದು. ಕತೆಗಳು ಪರಿಸರಕ್ಕೆ ಸ್ಪಂದಿಸಬೇಕು. ಜೀವನದ ಎಲ್ಲ ಸ್ಥರಗಳ ಬಗ್ಗೆ ಲೇಖಕರು ಜ್ವಲಂತವಾಗಿ ಪ್ರಜ್ಞೆ ಮೂಡಿಸಿಕೊಂಡರೆ ಶ್ರೇಷ್ಠ ಕತೆಗಳ ರಚನೆ ಸಾಧ್ಯ ಹಾಗೂ ಸಾರ್ಥಕ. ಜೀವಂತವಾದ ಅಭಿವ್ಯಕ್ತಿಯನ್ನು ಕೊಡುವ ಪ್ರಯತ್ನದಲ್ಲಿ ಅನೇಕ ಕತೆಗಳು ಸಫಲವಾಗಿವೆ.

ಆರ್ಯಾಂಬ ಪಟ್ಟಾಭಿ ಅವರು ಒಟ್ಟು ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಮರಳಿ ಬಂದ ಮಮತೆ, ಉದಯ ರವಿ, ನನ್ನವಳು, ತೆರೆ ಸರಿದಾಗ ಎಂಬ ನಾಲ್ಕು ಕಥಾಸಂಕಲನಗಳಲ್ಲಿ ಅರವತ್ತಕ್ಕೂ ಹೆಚ್ಚು ಕತೆಗಳಿವೆ. ಉತ್ತಮ ಕಥಾ ಹಂದರವುಳ್ಳ ಈ ಕತೆಗಳಿಂದಾಗಿ ಕನ್ನಡದ ಪ್ರಬುದ್ಧ ಶ್ರೇಷ್ಠ ಕಥೆಗಾರರೆಂದು ಪ್ರಸಿದ್ಧರಾಗಿದ್ದಾರೆ. ಸಂಖ್ಯಾದೃಷ್ಟಿಯಿಂದ ಕಾದಂಬರಿಗಳನ್ನು ಹೆಚ್ಚು ಬರೆದಿದ್ದರೂ ಸಣ್ಣ ಕಥೆ ಅವರ ನೆಚ್ಚಿನ ಪ್ರಕಾರವಾಗಿದೆ.

ಆರ್ಯಾಂಬ ಅವರು ತಮ್ಮ ಕಥೆಗಳಲ್ಲಿ ಹೆಣ್ಣಿನ ತಲ್ಲಣ, ತಳಮಳ, ಸೂಕ್ಷ್ಮಸಂವೇದನೆ, ಸಾಮಾಜಿಕ ಮೌಲ್ಯಗಳು ಹಾಸುಹೊಕ್ಕಾಗಿವೆ. ಪಾತ್ರಗಳ ಸೃಷ್ಟಿಯಲ್ಲಿ ಅವುಗಳು ಆಡುವ ಮಾತುಗಳಲ್ಲಿ, ವಾಸ್ತವಿಕತೆ ಮತ್ತು ಸಹಜತೆಗಳಲ್ಲಿ ಮೂಡಿಬಂದಿವೆ. ಶೈಲಿಯಲ್ಲಿ ಸಂಯಮ, ಬದುಕಿನ ಸಂಕೀರ್ಣ ಸ್ಥಿತಿ.

ಮಾನವೀಯ ಸಂಬಂಧಗಳು ಈ ಹಿನ್ನೆಲೆಯಲ್ಲಿ ನನ್ನ ಪ್ರಬಂಧದಲ್ಲಿ ಆರ್ಯಾಂಬ ಕಥೆಗಳನ್ನು ಚರ್ಚಿಸಿಲಾಗಿದೆ. ಆರ್ಯಾಂಬ ಪಟ್ಟಾಭಿ ಅವರ ಕಥಾಸಂಕಲನಗಳಲ್ಲಿನ ಕೌಟುಂಬಿಕ ಚಿತ್ರಣವೆಂದರೆ ಬಹುತೇಕ ಕತೆಗಳಲ್ಲಿನ ಕೌಟುಂಬಿಕ ವಾತಾವರಣದಲ್ಲಿ ಹಿರಿಯರ ಆಶೋತ್ತರಗಳನ್ನು ಕಿರಿಯರು ನೆರವೇರಿಸದಿರುವುದು, ತಾಯ್ತಂದೆಯವರನ್ನು ಕರ್ತವ್ಯವೆಂದು ಭಾವಿಸಿ ನೋಡಿಕೊಳ್ಳದಿರುವ ಧಾರ್ಷ್ಟ್ಯ ಸ್ವಭಾವಗಳು ಅಪ್ಪ ಅಮ್ಮಂದಿರಿಗೆ ತಿಳಿಸದೇ ಮದುವೆಯಾಗುವ, ಮದುವೆ ಈ ಕಥೆಗಳಲ್ಲಿ ಗಮನಿಸಬಹುದಾಗಿದೆ. ಬ್ರಹ್ಮಚಾರಿ ಸುಖಿ, ಅವಿವಾಹಿತೆಗೆ ನೆಮ್ಮದಿ ಎಂದು ಬಿಂಬಿಸುವ ಕತೆಗಳನ್ನು ಇಲ್ಲಿ ನೋಡಬಹುದು.

'ಸಮ್ಮತಿ' ಕತೆಯಲ್ಲಿನ ರಾಜೀವ, ವಿನುತ ದಂಪತಿಗಳಿಗೆ ಹರ್ಷ ಎಂಬ ಮಗ ಇರುತ್ತಾನೆ. ರಾಜೀವ ಒಳ್ಳೆಯ ಕೆಲಸದಲ್ಲಿರುತ್ತಾನೆ. ವಿನುತ ಶಾಲೆಯೊಂದರಲ್ಲಿ ಅಧ್ಯಾಪಕಿ. ಮನೆಯ ಎಲ್ಲ ಕೆಲಸಗಳನ್ನು ಮುಗಿಸಿ ಮಗನನ್ನು ಮಧ್ಯವಯಸ್ಸಿನ ಆಯಾ ಒಬ್ಬಳಿಗೆ ವಹಿಸಿ ಕೆಲಸಕ್ಕೆ ಹೋಗುತ್ತಿರುತ್ತಾಳೆ. ಮೊದಲಿನಿಂದಲೂ ರಾಜೀವನಿಗೆ ಹೆಂಡತಿಗೆ ಕೆಲಸಕ್ಕೆ ಹೋಗುವುದು ಇಷ್ಟವಿರುವುದಿಲ್ಲ. ಆದರೆ ವಿನುತಳಾ ಕೆಲಸ ಬಿಡಲು, ಬರಿಯ ಮನೆಯ ಕೆಲಸ ಮಾಡಿಕೊಂಡು ಮನೆಯಲ್ಲಿರಲು ಒಪ್ಪುವುದಿಲ್ಲ. ಕಲಿತದ್ದನ್ನು ನಾಲ್ಕು ಜನರಿಗೆ ಕಲಿಸುವ ಅಭಿಲಾಷೆ ಅವಳದು. ರಾಜೀವನ ಸಹೋದ್ಯೋಗಿಗಳು ಈ ಬಗ್ಗೆ ಟೀಕಿಸಿದಾಗ ರಾಜೀವ ಅವಳು ಕೆಲಸಕ್ಕೆ ಹೋದರೆ ಮನೆ ಬಿಡುವ ಧಮಕಿ ಹಾಕಿ ಲಾಡ್ಜ್‌ವೊಂದರಲ್ಲಿ ಉಳಿಯುತ್ತಾನೆ. ಗಂಡ ಇವತ್ತು ಬರಬಹುದು, ನಾಳೆ ಬರಬಹುದೆಂದು ಕಾಯುತ್ತಿದ್ದ ವಿನುತಳಿಗೆ ಮಗ ಹರ್ಷ ತಂದೆಗಾಗಿ ಹಂಬಲಿಸಿ ಆರೋಗ್ಯ ಹದೆಗೆಟ್ಟಾಗ ವಿಧಿ ಇಲ್ಲದೇ ಗಂಡ ಕೆಲಸ ಮಾಡುತ್ತಿದ್ದ ಕಾಲೇಜಿಗೆ ಹೋಗಿ ಮನೆಗೆ ಕರೆಯುತ್ತಾಳೆ. ಆಗ ಗಂಡ ನೀನು ಕೆಲಸ ಬಿಡುವುದಾದರೆ ಮಾತ್ರ ಮನೆಗೆ ಬರುತ್ತೇನೆ ಎಂದಾಗ ವಿನುತ ಮಗುವಿಗೆ ಹುಷಾರಿಲ್ಲ ಎಂದಾಗ ರಾಜೀವ ಮರುಮಾತಿಲ್ಲದೇ ಮನೆಗೆ ಬರುತ್ತಾನೆ. ಮಗು ತಂದೆಯನ್ನು ಕಂಡು ಕೆಲ ದಿನಗಳಲ್ಲೇ

ಆರೋಗ್ಯ ಪಡೆದಾಗ, ರಾಜೀವ ಮತ್ತೆ ಮನೆ ಬಿಟ್ಟು ತೆರಳಲು ಸಿದ್ಧನಾಗುತ್ತಾನೆ. ಆಗ ವಿನುತ ನೀವು ಮನೆ ಬಿಡುವ ಅಗತ್ಯವಿಲ್ಲ. ನಾನು ಕೆಲಸಕ್ಕೆ ರಾಜಿನಾಮೆಯನ್ನು ನಾಳೆ ನೀಡುತ್ತಿರುವುದಾಗಿ ತಿಳಿಸುತ್ತಾಳೆ. ಮಗನ ಆರೋಗ್ಯಕ್ಕಾಗಿ ಆಕೆ ತನ್ನ ಸ್ವಂತ ಆಸೆಯನ್ನು ಬದಿಗಿಟ್ಟಾಗ ರಾಜೀವನು ಅಂದು ರಾತ್ರಿ ಚಿಂತಿಸುವುದೇನೆಂದರೆ ಮನೆ, ಮಗ, ಗಂಡನ ಎಲ್ಲಾ ಕರ್ತವ್ಯಗಳನ್ನು ಕಿಂಚಿತ್ ಲೋಪವಿಲ್ಲದಂತೆ ಮಾಡಿಟ್ಟು ಕೆಲಸಕ್ಕೆ ತೆರಳಿ ಅಲ್ಲಿ ಆಕೆಗೆ ಮಾನಸಿಕ ನೆಮ್ಮದಿ, ಸಂತೋಷವಾಗುವುದಿದ್ದರೆ ನಾನೇಕೆ ಅದನ್ನು ನಿರಾಕರಿಸಲಿ ಎಂದು ತೀರ್ಮಾನಿಸಿ ಅವಳ ರಾಜಿನಾಮೆ ಪತ್ರವನ್ನು ಹರಿದು ಬಿಸಾಕುತ್ತಾನೆ.

ಈ ಕತೆಯಲ್ಲಿ ದಂಪತಿಗಳಿಬ್ಬರು ಒಂದು ಕೌಟುಂಬಿಕ ವಾತಾವರಣ ಸುಗಮವಾಗಿ ಸಾಗಲು ಪರಸ್ಪರರು ಸಹಕಾರ, ತ್ಯಾಗ, ಪ್ರೀತಿಯನ್ನು ಹಂಚಿಕೊಂಡು ಗೌರವಿಸಿದರೆ ಮಾತ್ರ ಬದುಕು ಸಹನೀಯವಾಗುತ್ತದೆ ಎಂಬುದನ್ನಿಲ್ಲಿ ಕತೆಗಾರ್ತಿ ಚಿತ್ರಿಸಿದ್ದಾರೆ.

**ಸಂಬಂಧಗಳು :** ಕತೆಯಲ್ಲಿನ ಶಾಮಣ್ಣ, ಪಾರ್ವತಮ್ಮರಿಗೆ ಸುರೇಶ ಒಬ್ಬನೇ ಮಗ. ಅಮೇರಿಕಾದಲ್ಲಿ ಮಗ ನೆಲೆಸಿದ್ದು ತಾಯ್ತಂದೆಯರಿಗೆ ತಿಂಗಳು ತಿಂಗಳು ಖರ್ಚಿಗೆ ಕಳುಹಿಸುತ್ತಾ, ಗೃಹಪ್ರವೇಶಕ್ಕೆ ಅಮೇರಿಕಾಗೆ ಬನ್ನಿ ಎಂದು ಅಪ್ಪ, ಅಮ್ಮಂದಿರನ್ನು ಕರೆಯುತ್ತಾನೆ. ವೃದ್ಧಾಪ್ಯದ ದೆಸೆಯಿಂದ ಅಲ್ಲಿಗೆ ಹೋದರೆ ಕಷ್ಟ ಎಂದು "ಕಾಯಿಲೆ ಕಸಾಲೆ ಇದ್ದವರು ಅಮೇರಿಕಾ ದೇಶಕ್ಕೆ ನಮಗೂ ಕಷ್ಟ, ಅವರಿಗೂ ತೊಂದರೆ ಅಲ್ಲವೆ? ನಮ್ಮಿಂದ ಬೇರೆಯವರಿಗೆ ಉಪಕಾರವಾಗದಿದ್ರೂ ತೊಂದರೆಯಾಗಬಾರದು"[1] ಎಂದು ನೆಪ ಹೇಳಿ ಇಲ್ಲಿಯೇ ಉಳಿಯುತ್ತಾರೆ. ಮಗ ಅಂತರ್ಜಾತಿ ವಿವಾಹವಾದ ಬಗ್ಗೆ ಬೇಸರವಿದ್ದರೂ ಅವನ ಬಗ್ಗೆ ಕೋಪವಿಲ್ಲ. "ಖಂಡಿತ ನನಗೆ ಕೋಪವಿಲ್ಲ, ಅವನ ಸಂತೋಷ ನನಗೆ ಮುಖ್ಯ. ಚಿಗುರೆಲೆ ನೋಡಿ ಹಣ್ಣೆಲೆ ಕಣ್ಣೀರು ಹಾಕಬಾರದು, ಅಸೂಯೆ

---

1. ತೆರೆ ಸರಿದಾಗ, ಪು. ೯೩

ಪಡಬಾರದು"[1] ಎಂದು ಶಾಮಣ್ಣ ಇರುವ ಪರಿಸ್ಥಿತಿಯನ್ನೇ ಒಪ್ಪಿ ಬಾಳುತ್ತಾರೆ. ಒಂದು ಕುಟುಂಬದ ವಾತಾವರಣ, ಸಂಬಂಧಗಳು ಸೌಹಾರ್ದಯುತವಾಗಿ ಸಾಗಬೇಕಾದರೆ ಇದ್ದುದ್ದರಲ್ಲಿಯೇ ತೃಪ್ತಿ ಪಟ್ಟುಕೊಂಡು ಮಕ್ಕಳಿಗೆ ಸಂತಸವಾಗಿರಲು ಬಿಡಬೇಕು ಎಂಬುದು ಈ ಕತೆಯ ತಾತ್ಪರ್ಯ. ತಮಗೆಷ್ಟೇ ನೋವಿದ್ದರೂ ಮಕ್ಕಳ ಬಾಳು ಹಸನಾಗಲಿ ಎಂಬುದು ತಾಯ್ತಂದೆಯ ಪ್ರೀತಿಯನ್ನು ತೋರಿಸುತ್ತದೆ.

**ಅಭಿವ್ಯಕ್ತಿ** ಕತೆಯಲ್ಲಿ ಹಳೆಯ ಸ್ನೇಹಿತರಿಬ್ಬರು ಭೇಟಿಯಾಗಿ ತಮ್ಮ ತಮ್ಮ ಸಂಸಾರದ ಬಗ್ಗೆ, ತಮ್ಮ ಹಳೆಯ ಗೆಳೆಯರ ಬಗ್ಗೆ ಮಾತನಾಡಿಕೊಳ್ಳುವಾಗ ಕಂಡು ಬಂದ ಅಂಶವೆಂದರೆ ಗಂಡಾಗಲಿ, ಹೆಣ್ಣಾಗಲಿ ಯಾವ ಮಕ್ಕಳಿಗೂ ಭವಿಷ್ಯತ್‌ನಲ್ಲಿ ಆಗುವುದಿಲ್ಲ ಎಂಬ ವಾಸ್ತವ ಸತ್ಯ. "ಪ್ರೀತಿ, ತ್ಯಾಗಕ್ಕೆ ಇಂದು ಯಾವ ಬೆಲೆಯೂ ಇಲ್ಲ ಮೂರ್ತಿ. ಯಾಕೆಂದರೆ ಮಾನವ ಸಂಬಂಧಗಳು ಮನಸ್ಸಿನಂತೆ ಚಂಚಲ. ಬದಲಾಯಿಸುತ್ತಲೇ ಇರುತ್ತವೆ. ನಮ್ಮ ಮನಸ್ಸನ್ನೇ ಕೆಲವೊಮ್ಮೆ ಅರ್ಥ ಮಾಡಿಕೊಳ್ಳುವುದು ಅಸಾಧ್ಯವಾಗಿರುವಾಗ ಬೇರೆಯವರ ಮನಸ್ಸನ್ನು ಅರಿಯುವುದಾದರೂ ಹೇಗೆ?"[2] ಎಂದು ಮಾತನಾಡಿಕೊಳ್ಳುತ್ತಾರೆ. ನಮ್ಮ ಮಕ್ಕಳು ಆಗೋಲ್ಲ ಎಂದು ಅನಾಥ ಮಕ್ಕಳನ್ನು ಸಾಕಿದರೆ ಅವೂ ಕೂಡ ಸರಿ ಇಲ್ಲ, ಹೀಗಾಗಿ ಖಾಸಗಿ ವಿದ್ಯಾಸಂಸ್ಥೆಗೆ ಆಸ್ತಿ ದಾನ ಮಾಡುವ ಹಿರಿಯರನ್ನು ಈ ಕತೆಯಲ್ಲಿ ಕಾಣಬಹುದು. ಒಟ್ಟಿನಲ್ಲಿ ಮದುವೆಯಾಗಿಲ್ಲದಿದ್ದವರೇ ನೆಮ್ಮದಿಯಾಗಿರುವವರು ಎಂದು ಕಥೆ ಮುಕ್ತಾಯ.

ಇಂಥದೇ ಕಥಾವಸ್ತುವುಳ್ಳ ಮತ್ತೊಂದು ಕತೆ ಎಂದರೆ **'ಪುಣ್ಯವಂತರು'**. ಕೆಳಮನೆ ಶಂಕರಭಟ್ಟರು ಪತ್ನಿ ಸೀತಮ್ಮ ತೋಟದ ಮಧ್ಯೆ ಇಬ್ಬರೇ ವಾಸಿಸುತ್ತಿರುತ್ತಾರೆ. ಮೂವರು ಮಕ್ಕಳು ವಿದ್ಯಾಭ್ಯಾಸಕ್ಕಾಗಿ ಬೇರೆ ಬೇರೆ ಊರಿನಲ್ಲಿ ನೆಲೆಸಿರುತ್ತಾರೆ. ಮಗ ತಾಯ್ತಂದೆಯ ಪ್ರೀತಿ, ವಿಶ್ವಾಸಕ್ಕೆ ಬೆಲೆ ಕೊಡದೆ

---

1. ತೆರೆ ಸರಿದಾಗ, ಪು. ೯೭
2. ತೆರೆ ಸರಿದಾಗ, ಪು. ೧೧೮

ಅವರಿಗೆ ತಿಳಿಸದೇ ಮದುವೆಯಾಗಿದ್ದಲ್ಲದೇ ತಾಯಿ ಸೀತಮ್ಮ ಸತ್ತಾಗಲೂ ಅವನು ಊರಿಗೆ ಬರದ ಕೃತಘ್ನ ಮಗನಾಗಿರುತ್ತಾನೆ. ವಿದೇಶದಲ್ಲಿಯೇ ಶಾಶ್ವತವಾಗಿ ನೆಲೆಸಿ ತಂದೆ ಒಂಟಿಯಾಗಿದ್ದಾರೆಂಬ ಕೊರಗೂ ಅವನಿಗಿರುವುದಿಲ್ಲ.

ಹಾಗಾಗಿ ಶಂಕರಭಟ್ಟರು ಕಥಾನಿರೂಪಕರಿಗೆ "ಗೃಹಸ್ಥ ಧರ್ಮಪಾಲನೆಗಾಗಿ, ವಂಶೋದ್ಧಾರಕ್ಕಾಗಿ ನೀವು ಮದುವೆಯಾಗಲೇಬೇಕೆಂದು ಸಲಹೆ ಕೊಟ್ಟಿದೆ. ಆದರೆ ಯಾವ ಉದ್ದೇಶದಿಂದ ನಾನು ಮದುವೆಯಾದೆನೋ ಆ ನಂಬಿಕೆಯಲ್ಲಿದ್ದ ಶಕ್ತಿಯನ್ನು ನಾನೀಗ ಕಳೆದುಕೊಂಡಿದ್ದೇನೆ. ಅದಕ್ಕೆ ನನ್ನ ಬದುಕೇ ಸಾಕ್ಷಿ. ಮದುವೆಯಾಗದ ನೀವು ನಿಜಕ್ಕೂ ಪುಣ್ಯವಂತರು. ಪ್ರೀತಿಯ ಹೆಂಡತಿ ಹಾಗೂ ಮಕ್ಕಳ ಅಗಲಿಕೆಯ ನೋವು ನಿಮಗಿಲ್ಲ...."[1] ಎಂದು ಶಂಕರಭಟ್ಟರು ನಿರೂಪಕರಿಗೆ ಬೇಸರದಿಂದ ನುಡಿಯುತ್ತದೆ.

ಒಟ್ಟಿನಲ್ಲಿ ಆರ್ಯಾಂಬ ಪಟ್ಟಾಭಿಯವರ ಕತೆಗಳಲ್ಲಿ ಕುಟುಂಬ ವ್ಯವಸ್ಥೆ ತನ್ನ ಸುಮಧುರ, ಸೌಹಾರ್ದಯುತ ಸಂಬಂಧಗಳಿಂದ ವಿಮುಖವಾಗುತ್ತಿರುವ, ಯಾಂತ್ರಿಕ, ಸ್ವಾರ್ಥ ಮಕ್ಕಳ ಕತೆಗಳನ್ನು ಬಿಂಬಿಸುತ್ತಿರುವುದನ್ನು ಗುರುತಿಸಿದ್ದೇನೆ. ಅಧ್ಯಯನದ ದೃಷ್ಟಿಯಿಂದ ಈ ಕೆಳಕಂಡಂತೆ ಪ್ರತ್ಯೇಕ ವಿಭಾಗಗಳನ್ನು ಮಾಡಿಕೊಂಡು ಕೌಟುಂಬಿಕ ವ್ಯಾಪ್ತಿಯಲ್ಲಿ ಇರಬಹುದಾದ ಕತೆಗಾರ್ತಿ ವ್ಯಕ್ತಪಡಿಸಿರುವ ಧೋರಣೆಗಳನ್ನು ಇಲ್ಲಿ ಗುರುತಿಸಿದ್ದೇನೆ.

೧. ಕತೆಗಳಲ್ಲಿ ಪ್ರೀತಿ ಪ್ರೇಮ ಚಿತ್ರಣ.

೨. ಸಾಂಪ್ರದಾಯಿಕ ನಿಲುವುಳ್ಳ ಕತೆಗಳು.

೩. ಆಧುನಿಕ ಧೋರಣೆಯುಳ್ಳ ಕತೆಗಳು.

---

1. ತೆರೆ ಸರಿದಾಗ, ಪು. ೧೪೯

## ೧. ಆರ್ಯಾಂಬ ಪಟ್ಟಾಭಿಯವರ ಕತೆಗಳಲ್ಲಿ ಪ್ರೀತಿ ಪ್ರೇಮ :

ತೆರೆ ಸರಿದಾಗ ಕತೆಯಲ್ಲಿ ಪ್ರತಿಭ, ಪ್ರಭಾಕರ ಪರಸ್ಪರ ಪ್ರೀತಿಸಿ ಮದುವೆಯಾಗಿದ್ದರೂ ಎರಡು ಮಕ್ಕಳಾದ ನಂತರ ಅವರಲ್ಲಿ ಹೊಂದಾಣಿಕೆ ಅಸಾಧ್ಯವಾಯ್ತು. ಹೆಂಡತಿಯನ್ನು, ಮಕ್ಕಳನ್ನು ಹೆರುವ ಯಂತ್ರ ಎಂದು ಭಾವಿಸಿ ಕುಡಿತ, ಕ್ಲಬ್‌ನಲ್ಲೇ ಪ್ರಭಾಕರ ಮೈಮರೆತರೆ ಪ್ರತಿಭ ವಿಚ್ಛೇದನ ಮಾಡಿ ಒಂಟಿಯಾಗಿ ಬದುಕಲು ಹೆದರಿ ಅನುಸರಿಸಿಕೊಂಡು ಹೋಗುತ್ತಿರುತ್ತಾಳೆ. ಹೀಗಾಗಿ ಅವಳ ಅನುಭವವನ್ನೇ ಕಥಾನಿರೂಪಕಿಗೆ ತಿಳಿಸಿ. ಖಂಡಿತ ಮದುವೆಯಾಗಬೇಡ ಎಂದು ಪ್ರೇಮ ವಿವಾಹವಾಗಿ ಭ್ರಮ ನಿರಸನಗೊಂಡ ಕತೆ ಹೇಳುತ್ತಾಳೆ. ಮಕ್ಕಳಿಗಾಗಿ, ಸಮಾಜಕ್ಕೆ ಹೆದರಿ, ವಿಚ್ಛೇದನಕ್ಕೆ ಹೆದರಿ ಇಷ್ಟವಿಲ್ಲದಿದ್ದರೂ ಬಾಳುತ್ತಿರುವ ಕತೆಗಳನ್ನು ಕೇಳಿಯೂ ಕಥಾನಿರೂಪಕಿ ಆನಂದನ ಸುಂದರವಾದ ಮುಖ ನೋಡಿ ಆತಂಕ ಮರೆಯುತ್ತಾಳೆ. "ಹಲವರ ನೋವಿನ ದಾಂಪತ್ಯದ ಬದುಕಿನ ಹಿನ್ನೆಲೆಯಲ್ಲಿ ನನ್ನ ಭವಿಷ್ಯವನ್ನು ಅರ್ಥೈಸಿ ಹೆದರುವುದು ತಪ್ಪೆಂದು ತೀರ್ಮಾನಿಸಿದೆ"[1] ಎಂದು ಮದುವೆಗೆ ಒಪ್ಪುತ್ತಾಳೆ. ಎಲ್ಲರ ಭಗ್ನಪ್ರೇಮಕತೆಯಂತೆ. ತನ್ನದು ಅಂತ ತಿಳಿಯಬಾರದು ಎಂಬ ಸೂಚ್ಯ ಅಂಶವಿಲ್ಲಿ ವ್ಯಕ್ತವಾಗಿದೆ.

**ಪ್ರಜ್ಞೆ** ಎಂಬ ಕತೆಯಲ್ಲಿ ಕಾವೇರಿ ಎಂಬ ಹುಡುಗಿಯನ್ನು ಕಥಾನಿರೂಪಕ ಪ್ರೀತಿಸಿ ಮದುವೆಯಾಗಿರುತ್ತಾನೆ. ಮನೆಯವರನ್ನು ಎದುರು ಹಾಕಿಕೊಂಡು ಬಂದ ಕಾವೇರಿಗೆ ಕ್ಯಾನ್ಸರ್ ಬಂದಾಗ ತಾನು ಸಾವಿಗೆ ಹತ್ತಿರವಾಗುತ್ತಿದ್ದೇನೆಂಬ ಭಯಕ್ಕಿಂತ ತನ್ನ ಗಂಡ ಒಂಟಿಯಾಗಿರುತ್ತಾನಲ್ಲ, ಅವನ ಭವಿಷ್ಯವೇನು ಎಂಬ ಆತಂಕ. ತನ್ನ ಬಾಯಿಲೆ ತಿಳಿದರೆ ಗಂಡ ನೊಂದಾನೆಂದು ಹೆದರಿ ತನ್ನಲ್ಲೇ ನೋವನ್ನಡಗಿಸಿಕೊಂಡ ಹೆಣ್ಣನ್ನು ಈ ಕತೆಯಲ್ಲಿ ಕಾಣಬಹುದು.

---

1. ತೆರೆ ಸರಿದಾಗ, ಪು. ೧೫

**ಉಪಕಾರ** ಎಂಬ ಕತೆಯಲ್ಲಿನ ಸುರೇಶ ಬ್ಯಾಂಕಿನಲ್ಲಿ ಹಣ ಡ್ರಾ ಮಾಡಿ ಬರುವಾಗ ಪಿಕ್‌ಪಾಕೆಟ್ ಮಾಡಿದ ಹುಡುಗನನ್ನು ಕ್ಷಮಿಸಿ ಅವನನ್ನು ಪ್ರೀತಿಯಿಂದ ಕರೆದು ಅವನನ್ನು ತಾನು ಓದಿಸುವ ವಿಷಯ ತಿಳಿಸುತ್ತಾನೆ. ಕಾರಣ ಅನಾಥ, ಕಳ್ಳನಾದ ತನ್ನನ್ನು ಒಬ್ಬ ಸಹೃದಯ ವ್ಯಕ್ತಿ ಪ್ರೀತಿಯಿಂದ ಓದಿಸಿ ಬೆಳೆಸಿದ್ದನ್ನು ನೆನೆದು ತಾನೂ ಸಹಾಯ ಮಾಡಲು ನಿರ್ಧರಿಸುತ್ತಾನೆ. ಒಬ್ಬ ವ್ಯಕ್ತಿ ತನ್ನ ಸಹಜೀವಿಯ ಕಷ್ಟಕ್ಕೆ ನೆರವಾಗಬೇಕಾದ ಆತನಿಗೆ ಪ್ರೀತಿ ತೋರಬೇಕಾದ ಅಗತ್ಯತೆಯನ್ನು ಈ ಕತೆ ಬಿಂಬಿಸುತ್ತಾರೆ.

'ಕಳ್ಳ' ಎಂಬ ಕತೆಯಲ್ಲಿ ಚೆನ್ನಿ, ಕೃಷ್ಣ ಹಳ್ಳಿಯಲ್ಲಿ ಪ್ರೀತಿಸಿ ಮದುವೆಯಾಗುತ್ತಾರೆ. ಬೆಂಗಳೂರಿನಲ್ಲಿ ನೆಲಸಿದಾಗ ಕೃಷ್ಣನ ನಡವಳಿಕೆಯಿಂದ ಚೆನ್ನಿಗೆ ತನ್ನ ಗಂಡ ಕಳ್ಳ ಎಂದು ಅರಿವಾದಾಗ ಬೇಸರಪಟ್ಟುಕೊಳ್ಳುತ್ತಾಳೆ. "ವೊಟ್ಟೆ ತುಂಬಿಸ್ಕೊಳ್ಳೋಕೆ ಈ ದರಿದ್ರ ಕಸುಬು ಬೇಕಾ? ಎಲ್ಡು ಬೊಗಸೆ ಮಯ್ಯಿ ತಿಂದ್ರು ವೊಟ್ಟೆ ತುಂಬ್ತವೆ. ನೀ ಈ ಕಸುಬು ಬಿಡದಿದ್ರೆ ನಾನು ನಿನ್ನ ಬಿಟ್ಟಂಗೆ ಅಂತ ತಿಳ್ಕೋ. ಮಕ್ಕಳನ್ನು ಬಾವಿಗೆ ತಳ್ಳಿ ನಾನೂ ಸಾಯ್ತೀನಿ"[1] ಎಂದು ಹೆದರಿಸುತ್ತಾಳೆ. ಚೆನ್ನಿಯ ಮೇಲಿನ ಪ್ರೀತಿ, ಅಭಿಮಾನದಿಂದ ಹೌತು ತಾನು ಮಾಡುತ್ತಿರುವುದು ತಪ್ಪು ಇನ್ನು ಮುಂದಾದರೂ ತಾನು ಸರಿಯಾಗಿ ಬಾಳಿ ಬದುಕಬೇಕೆಂಬ ತೀರ್ಮಾನಕ್ಕೆ ಕೃಷ್ಣ ಬರುತ್ತಾನೆ. ಆದರೆ ಪೋಲಿಸರು ಹಳೆಯ ಕಳ್ಳತನ ಕೇಸ್ ಸಂಬಂಧ ಕೃಷ್ಣನನ್ನು ಕರೆದೊಯ್ಯುತ್ತಾರೆ. ಈ ಕತೆಯಲ್ಲಿ ಕೆಲವೊಮ್ಮೆ ಯೌವನದ ಆಕರ್ಷಣೆಯಿಂದ ಅನರ್ಹ ವ್ಯಕ್ತಿಗಳನ್ನು ನಾವು ನಂಬಿ ಬಿಡುವ ಅಪಾಯವನ್ನು ಇಲ್ಲಿ ಬಿಂಬಿಸಲಾಗಿದೆ.

**ಪ್ರೇಮಪತ್ರ** ಕತೆಯಲ್ಲಿನ ಹುಡುಗಿಯೊಬ್ಬಳು ಪ್ರಕಾಶ ಎಂಬ ಕಾಲೇಜು ಪ್ರಾಧ್ಯಾಪಕನ ಪ್ರೇಮಕ್ಕೆ ಸಿಲುಕಿ ನಂಬಿರುವಾಗ ಆತ ಅವಳಿಗೆ ಮೋಸ ಮಾಡಿ ಪರಾರಿಯಾಗುತ್ತಾನೆ. ಆಗ ಮಾನಸಿಕ ಅನಾರೋಗ್ಯಕ್ಕೆ ಗುರಿಯಾದ ಹುಡುಗಿ ನಿರೂಪಕರಿಂದ ಪ್ರಕಾಶ್ ಇನ್ನೂ ತನಗೆ ಪತ್ರ

---

1. ತೆರೆ ಸರಿದಾಗ, ಪು. ೭೩

ಬರೆಯುತ್ತಿದ್ದಾನೆಂದೇ ಭಾವಿಸಿ ಉತ್ತರ ಬರೆಸುವುದು, ತಾನೂ ಉತ್ತರಿಸಿದಂತೆ ಬರೆಯುವ ಮನೋರೋಗಿಯ ಚಿತ್ರಣವಿದೆ. ವಿಪರೀತ ಪ್ರೀತಿ ಇಟ್ಟುಕೊಂಡ ಹೆಣ್ಣು ಮಗಳೊಬ್ಬಳು ತನ್ನ ನಿರೀಕ್ಷೆ ವಿಫಲವಾದಾಗ ಆಗುವ ಮನೋ ವೈಫಲ್ಯವನ್ನು ಈ ಕತೆ ಕಟ್ಟಿಕೊಡುತ್ತದೆ.

**ಅಜ್ಜಿ** ಎಂಬ ಕತೆಯಲ್ಲಿ ಸಂಬಂಧದಲ್ಲಿ ಅಜ್ಜಿಯಾಗಿಲ್ಲದಿದ್ದರೂ ತುಂಬು ಪ್ರೀತಿ ನೀಡಿದ ಅಜ್ಜಿಯೊಬ್ಬಳ ಸಾವಿಗೆ ಇಡೀ ಕುಟುಂಬದವರು ಹರಿಸುವ ಕಣ್ಣೀರು, ವ್ಯಥೆ ವ್ಯಕ್ತವಾಗಿದೆ. ಪ್ರೀತಿಸಲು ನಮ್ಮವರು ತಮ್ಮವರೇ ಆಗಬೇಕಿಲ್ಲ ಎಂಬ ವಾಸ್ತವಿಕತೆಯನ್ನು ಕತೆ ವ್ಯಕ್ತಪಡಿಸುತ್ತದೆ.

**ನಾಯಿ ಬಾಲ** ಎಂಬ ಕತೆಯಲ್ಲಿ ಗಂಡ ಹೆಂಡತಿ ಇರುತ್ತಾರೆ. ಅವಳು ತನ್ನ ಗಂಡನನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿರುತ್ತಾಳೆ. ಆದರೆ ಆತ ಅದಕ್ಕೆ ವಿರುದ್ಧ. ಅವಳು ತುಂಬಿದ ಮನೆಯಿಂದ ಬಂದಂತಹ ಸಂಪ್ರದಾಯ ಹುಡುಗಿ, ಅವನೋ ಮನೆಗೆ ಸರಿಯಾಗಿ ಬಂದುದೇ ಇಲ್ಲ. ಯಾವಾಗಲು ಕ್ಲಬ್, ಡಾನ್ಸ್, ಫ್ರೆಂಡ್ಸ್ ಅಂತ ಸುತ್ತುತ್ತ ಹೊರಗಿನ ಚಟುವಟಿಕೆಗಳಲ್ಲಿ ಹೆಚ್ಚು ಕಾಲ ಕಳೆಯುತ್ತಿರುತ್ತಾನೆ. ಇದರಿಂದ ಬೇಸರಗೊಂಡ ಅವಳು ತನ್ನ ತವರು ಮನೆಗೆ ಹೋಗುತ್ತಾಳೆ. ಹೆಂಡತಿ ಇಲ್ಲದೆ ಮನೆಗೆ ಬಂದಾಗ ತುಂಬಾ ಬೇಸರ ಉಂಟಾಗಿ ನನ್ನ ಹೆಂಡತಿ ನಾನು ಇಲ್ಲದ ಕಾಲವನ್ನು ಎಷ್ಟು ಕಷ್ಟದಿಂದ ಕಳೆದಿರಬಹುದೆಂಬ ಅರಿವುಂಟಾಗಿ ಅವಳ ತವರು ಮನೆಗೆ ಹೋಗಿ ಅವಳನ್ನು ಒಪ್ಪಿಸಿ ತನ್ನ ಮನೆಗೆ ಕರೆತಂದು ತಾನು ಇನ್ನು ಮುಂದೆ ಈ ರೀತಿ ನಡೆದುಕೊಳ್ಳದಿಲ್ಲವೆಂದು ಪ್ರಮಾಣ ಮಾಡುತ್ತಾನೆ. ಆದರೆ ಆ ಪ್ರಮಾಣ ಪರಿಪಾಲನೆ ಕೆಲವೇ ದಿನ ಮಾತ್ರ. ಪುನಃ ಅವನು ಯಥಾಸ್ಥಿತಿ ಅನುಸರಿಸುತ್ತಾನೆ.

ಗಂಡಿನ ದರ್ಪ ಮನಸ್ಸು ತನ್ನ ಹೆಂಡತಿಯನ್ನು ಅರ್ಥ ಮಾಡಿಕೊಳ್ಳದೆ ದುರ್ಬಲ ಹೃದಯ ಹೀನ ಮನಸ್ಸು ಇವೆಲ್ಲವನ್ನು ಲೇಖಕಿ ಓದುಗರಿಗೆ ಅರ್ಥಪೂರ್ಣವಾಗಿ ನಿರೂಪಿಸಿದ್ದಾರೆ.

ನಾಯಿಬಾಲ ಏನು ಮಾಡಿದರು ಡೊಂಕು ಎಂಬ ವಿಚಾರವನ್ನು ದೃಷ್ಟಾಂತದ ಮೂಲಕ ಕಥೆಗಾರ್ತಿ ವಿವರಿಸಿದ್ದಾರೆ.

'ಆ ಪುಸ್ತಕ' ಎಂಬ ಕತೆಯಲ್ಲಿ ದಪ್ಪಗಿರುವ ಹೆಣ್ಣೊಬ್ಬಳು ಸಣ್ಣಗಾಗಲು ಯತ್ನಿಸಿ ಸೋತು ಬಿದ್ದಾಗ ಗಂಡ ಹೆಂಡತಿಯನ್ನು ಹೇಗಿದ್ದರೂ ಚೆನ್ನ, ತಿಂದು ಗುಂಡಾಗಿರು ಎಂದು ವ್ಯಾಯಾಮದ ಪುಸ್ತಕವನ್ನು ಅವಳ ಗೆಳತಿ ಮನೆಗೆ ಎಸೆದು ಬರುತ್ತಾನೆ.

**೨. ಸಾಂಪ್ರದಾಯಿಕ ನಿಲುವುಳ್ಳ ಕತೆಗಳು :**

ಪಟ್ಟಾಭಿಯವರ ಕತೆಗಳಲ್ಲಿ ಅಂದಿನ ಸನ್ನಿವೇಶಗಳಲ್ಲಿನ ಬಹುಪಾಲು ಕತೆಗಳು ಬಿಂಬಿಸುತ್ತಿದ್ದ ತಾಯ್ತನ, ಬಂಜೆತನದ ಅಪಮಾನ, ಮಕ್ಕಳ ಅವಿದೇಯತೆಯನ್ನು ಗುರುತಿಸಬಹುದು. **ಆಕೆ ಹೇಳಿದ ಕತೆ**ಯಲ್ಲಿನ ಕಥಾನಾಯಕಿ ಅಂತರ್ಜಾತಿ ವಿವಾಹವಾಗಿ ಹಲವಾರು ವರ್ಷ ಅವಳಿಗೆ ಮಕ್ಕಳಿರುವುದಿಲ್ಲ. ಗಂಡನ ತಾಯ್ತಂದೆಯರು, ತಂಗಿಯ ಅತ್ತೆ ಮುಂತಾದವರು ಅವಳ ಬಂಜೆತನ ಕುರಿತು ಆಡಿಕೊಳ್ಳುತ್ತಿರುತ್ತಾರೆ. ಗಂಡ ಹೆಂಡತಿ ವೈದ್ಯರಲ್ಲಿ ಪರೀಕ್ಷಿಸಿಕೊಂಡಾಗ ಗಂಡನಲ್ಲಿ ದೋಷವಿದೆ ಎಂದು ತಿಳಿದರೂ ಬಾಯಿಬಿಟ್ಟು ಸಮಾಜಕ್ಕೆ ಹೇಳುವಂತಿಲ್ಲದ ಸಂದರ್ಭದಲ್ಲಿ ಗಂಡ ಹೆಂಡತಿಯ ದುಃಖ ನೋಡಲಾರದೆ ಅವಳಿಗೊಂದು ಸಲಹೆ ನೀಡುತ್ತಾನೆ. ತನ್ನ ಗೆಳೆಯ ಅರವಿಂದನಿಂದ ಮಗು ಪಡೆಯಲು, ಹೆಂಡತಿಗೆ ದತ್ತು ಮಗು ಬೇಡ, ಸ್ವಂತ ಮಗುವೇ ಬೇಕು. ಆದರೂ ಗಂಡನ ಸಲಹೆ ಅವಳಿಗೆ ಬೇಸರವಾಗಿ ನಿರಾಕರಿಸುತ್ತಾಳೆ. ನಂತರ ಗಂಡ ಕುಡಿಯಲು ಶುರು ಮಾಡಿ ಆರೋಗ್ಯ ಹಾಳು ಮಾಡಿಕೊಳ್ಳುವಾಗ ಆತನ ಸಲಹೆಯಂತೆ ನಡೆದು ಮಗು, ಪಡೆಯುತ್ತಾಳೆ. ಈ ಸಂದರ್ಭದಲ್ಲಿ ಆಕೆ ಕೊಡುವ ಕಾರಣ 'ಮಗುವಿಗಾಗಿ ನಾನು ಈ ಸಂಬಂಧ ಬೆಳೆಸುತ್ತಿಲ್ಲ, ಗಂಡನ ಪ್ರೀತಿ, ವಿಶ್ವಾಸವನ್ನು ಶಾಶ್ವತವಾಗಿ ಉಳಿಸಿಕೊಳ್ಳುವುದಕ್ಕೆ' ಎನ್ನುತ್ತಾಳೆ. ಗಂಡ ಇವರಲ್ಲಿ ತಪ್ಪಿಲ್ಲ ಎಂದಾಗ ಹೆಂಡತಿ

ಶಾಂತ 'ತಾಯಿಯಾಗುವ, ಬಂಜೆತನದ ಅಪವಾದದಿಂದ ಮುಕ್ತಿ ಹೊಂದುವ ಆಸೆ ಯಾವ ಹೆಣ್ಣಿಗಿರುವುದಿಲ್ಲ?[1] ಎಂದು ಗಂಡ ಮಹೇಶನಿಗೆ ತಿಳಿಸುತ್ತಾಳೆ.

ಇಂದು ವೈದ್ಯಕೀಯ ಕ್ಷೇತ್ರದಲ್ಲಿ ಮಕ್ಕಳ ಪಡೆಯಲು ನಾನಾ ಮಾರ್ಗಗಳಿವೆ. ಅಂದಿನ ಆ ಸನ್ನಿವೇಶದಲ್ಲಿ ಕಥಾನಾಯಕಿಯ ಮಗು ತಾನು ಹೆತ್ತರೆ ಮಾತ್ರ ತನ್ನದು ಎಂಬ ಸಾಂಪ್ರದಾಯಿಕ ನಿಲುವಿಗೆ ಬದ್ಧವಾಗಿ ಅನ್ಯ ಪುರುಷನ ಸಂಪರ್ಕದಿಂದಲಾದರೂ ಮಗು ಪಡೆಯಲು ನಿರ್ಧರಿಸುವುದು ಒಂದು ಸಾಂಪ್ರದಾಯಿಕ ನಿಲುವುಳ್ಳದ್ದಾಗಿದೆ.

ಸುಂದರಿ ಎಂಬ ಕತೆಯಲ್ಲಿ[2] ಹೆಣ್ಣಿಗೆ ಒಬ್ಬ ಪುರುಷ ಮೋಸ ಮಾಡಿದರೇನು ಅವಳಿಗೆ ಮತ್ತೊಬ್ಬ ಪುರುಷನ ಆಸರೆ ಬೇಕೇ ಬೇಕೆಂಬುದು ಕತೆಯ ಸಾಂಪ್ರದಾಯಿಕ ನಿಲುವಾಗಿದೆ.

**೩. ಆಧುನಿಕ ಧೋರಣೆಯುಳ್ಳ ಕಥೆಗಳು :**

ಆಧುನಿಕ ಕಥಾ ಸಾಹಿತ್ಯದ ಎರಡನೇ ತಲೆಮಾರಿಗೆ ಸೇರಿದ ಆರ್ಯಾಂಬರವರ ಕತೆಗಳಲ್ಲಿ ಆಧುನಿಕ ಧೋರಣೆಗಳು ಹೇರಳವಾಗಿ ದೊರಕುತ್ತವೆ.

**ತೆರೆ ಸರಿದಾಗ** ಕತೆಯಲ್ಲಿನ ಮದುವೆ ಹೆಣ್ಣು ಮದುವೆ ಬಗ್ಗೆ ಇತರರಿಂದ ಕೇಳಿ, ಗಂಡ, ಅತ್ತೆ, ಮಾವ ಸಂಸಾರ ಎಂಬುದರ ಬಗ್ಗೆ ಭೀತಳಾಗಿ ಮದುವೆಯಾಗಲು ಆತಂಕ ಪಡುತ್ತಾಳೆ. ಆದರೆ ಮಾಂಗಲ್ಯಧಾರಣೆಯ ಸಂದರ್ಭದವರೆಗೂ ಅವಳನ್ನು ಆಕ್ರಮಿಸಿದ ಭಯದ ಬಲೆ, ಅಜ್ಞಾನದ ತೆರೆ ಸರಿದು ಹಲವರ ನೋವಿನ ದಾಂಪತ್ಯದ ಹಿನ್ನೆಲೆ ತನಗೂ ಆಗಬೇಕಿಲ್ಲವಲ್ಲ ಎಂದು ಭಾವಿಸಿ, ತರ್ಕ ನಡೆಸಿ ನಿರ್ಭೀತಳಾಗಿ ಮದುವೆಯಾಗುತ್ತಾಳೆ. ಇಲ್ಲಿ ಬೇರೆಯವರಿಗಾದ ಶೋಷಣೆಗಳು ನನ್ನಲ್ಲೂ

---

1. ತೆರೆ ಸರಿದಾಗ, ಪು. ೬೬
2. ತೆರೆ ಸರಿದಾಗ, ಪು. ೪೨

ಸಂಭವಿಸುತ್ತವೆ ಎಂದೇಕೆ ಭಾವಿಸಬೇಕು, ಇದ್ದುದ್ದನ್ನು ಸ್ವೀಕರಿಸೋ ಎಂಬ ಆತ್ಮಸ್ಥೈರ್ಯದ ಹೆಣ್ಣಿನ ನಿಲುವನ್ನು ಗುರುತಿಸಬಹುದು.

**'ಪರಿವರ್ತನೆ'** ಎಂಬ ಕತೆಯಲ್ಲಿನ ಗೋಪಾಲ ತನ್ನ ಹೆಂಡತಿ ಕಲ್ಯಾಣಿಗೆ ಮದುವೆಯಾಗಿ ಎಂಟು ವರ್ಷ ಕಳೆದರೂ ಮಕ್ಕಳಾಗಲಿಲ್ಲ ಎಂದು ಸ್ವಲ್ಪ ದುಃಖದಲ್ಲಿದ್ದರೂ ಮರುಮದುವೆಗೆ ಆತ ಒಪ್ಪಿರುವುದಿಲ್ಲ. ಆದರೆ ಒಮ್ಮೆ ಮನೆಗೆ ಬಂದ ನಾದಿನಿ ಗೌರಿಯ ಸರಳ, ಸಹಜ ನಡತೆಗೆ ಮನ ಸೋತು ಇವಳಿಗೆ ನನ್ನಂಥ ಶ್ರೀಮಂತ ಗಂಡ ಎಲ್ಲಿ ಸಿಗಲು ಸಾಧ್ಯವೆಂದು ಭಾವಿಸಿ, ಹೆಂಡತಿಗೂ ತಿಳಿಸದೆ ಮಾವನಿಗೆ ಪತ್ರ ಬರೆಯುತ್ತಾನೆ. ಅಳಿಯನು ಎರಡನೇ ಮಗಳನ್ನು ಮದುವೆಯಾಗಬಯಸಿದ್ದು ಇಷ್ಟವಾಗದಿದ್ದರೂ ಮೊದಲ ಮಗಳಿಗೆ ಬರುವ ಬೇರೆ ಹೆಣ್ಣಿನ ಸವತಿ ಬದಲು ನನ್ನ ಎರಡನೇ ಮಗಳೇ ಏಕಾಗಬಾರದೆಂದು ಭಾವಿಸಿ ಗೌರಿಗೆ ಈ ಬಗ್ಗೆ ಕೇಳಿದಾಗ ಗೌರಿ ಭಾವನನ್ನು ಮದುವೆಯಾಗಲು ಒಲ್ಲೆ ಎಂದು ನಿರಾಕರಿಸುತ್ತಾಳೆ. ನಿಮಗೆ ಪತ್ರ ಬರೆಯಲು ತೊಂದರೆಯಾದರೆ ನಾನೇ ಭಾವನಿಗೆ ಪತ್ರ ಬರೆಯುತ್ತೇನೆಂದು ನಿರ್ಧರಿಸಿ ತನ್ನ ಮನದ ಮಾತನ್ನು ಹೀಗೆ ಬರೆಯುತ್ತಾಳೆ. "ಮರು ಮದುವೆಯಾಗ ತಂದೆಯ ಪದವಿಯನ್ನು ನೀವು ಸಂಪಾದಿಸಬಹುದು. ಆದರೆ ಈ ಮದುವೆಯಿಂದ ಕಲ್ಯಾಣಿಯ ಮನೋಸ್ಥಿತಿ ಏನಾಗಬಹುದೆಂದು ನೀವು ಯೋಚಿಸಿದ್ದೀರಾ? .... ಆ ದೋಷ ನಿಮ್ಮಲ್ಲೇ ಇದ್ದಿದ್ದರೆ ಮಗುವಿಗಾಗಿ ಕಲ್ಯಾಣಿ ಮತ್ತೊಂದು ಮದುವೆಯಾಗುತ್ತಿದ್ದಳೆ? ಖಂಡಿತ ಇಲ್ಲ. .... ನಾನು ಮದುವೆಯಾದವಳಲ್ಲ. ಅವಿವಾಹಿತನನ್ನು ಮದುವೆಯಾಗಿ ಹೊಚ್ಚ ಹೊಸ ಮಧುರ ದಾಂಪತ್ಯ ಜೀವನ ನಡೆಸಲು ಹಾತೊರೆಯುತ್ತಿರುವ ನಾನು ನಿಮ್ಮನ್ನು ಮದುವೆಯಾಗಲಾರೆ. ಒಂದು ಮಗುವಿಗಾಗಿ ನಮ್ಮೆಲ್ಲರ ನೆಮ್ಮದಿ, ಸುಖ, ಸಂತೋಷಗಳನ್ನು ಮರುಮದುವೆಯಿಂದ ಗಾಳಿಗೆ ತೂರಿಬಿಡುವುದು ನ್ಯಾಯವಲ್ಲ. ನಮ್ಮ ದೇಶದಲ್ಲಿ ಅನಾಥ ಮಕ್ಕಳಿಗೇನೂ ಕೊರತೆಯಿಲ್ಲ. ಅನಾಥ ಮಗುವನ್ನು

ಸಾಕಿಕೊಂಡರೆ ಒಂದು ಮಗುವಿಗೆ ತಂದೆ ತಾಯಿ ಹಾಗೂ ಉಜ್ವಲ ಭವಿಷ್ಯ ಕರುಣಿಸಿದ ಪುಣ್ಯ ನಿಮ್ಮದಾಗುತ್ತದೆ" ನಿಮ್ಮ ಪ್ರೀತಿಯ ತಂಗಿ ಗೌರಿ"[1] ಎಂದು ಬರೆಯುತ್ತಾಳೆ.

ಗೌರಿ ತನ್ನ ಮನದಾಳದ ಮಾತುಗಳನ್ನು ಬಚ್ಚಿಟ್ಟುಕೊಳ್ಳದೇ, ತಂದೆಯ ಮಾತಿನಂತೆ ನಡೆಯದೇ ಭಾವನನ್ನು ಅನಾಥ ಮಗು ಪಡೆಯಲು ಪ್ರೇರೇಪಣೆ ನೀಡಿ ಮರುಮದುವೆ ಎಂಬ ಸಾಂಪ್ರದಾಯಿಕ ರೀತಿಗೆ ಮಂಗಳ ಹಾಡುವ ಆಧುನಿಕ ಮನೋಭಾವವನ್ನು ಈ ಕತೆಯಲ್ಲಿ ಕಾಣಬಹುದು.

**ಪ್ರಜ್ಞೆ** ಎಂಬ ಕತೆಯಲ್ಲಿ ಕಾವೇರಿ ಅನಾರೋಗ್ಯಕ್ಕೀಡಾಗಿ ಗಂಡನಿಂದ ಪ್ರತ್ಯೇಕವಾಗಿ ಬೇರೆ ಕೊಠಡಿಯಲ್ಲಿ ಇರುತ್ತಿರುವಾಗ ಗಂಡ "ಕಾವೇರಿ, ನೀನು ನನ್ನ ಹೆಂಡತಿ. ನಿನ್ನನ್ನು ಮದುವೆಯಾದದ್ದು ನಿನ್ನ ಪಾಡಿಗೆ ಬಿಡುವುದಕ್ಕಲ್ಲ"[2] ಎಂದಾಗ ಹೆಂಡತಿ "ನಿಮ್ಮ ಹೆಂಡತಿ ಎಂದ ಮಾತ್ರಕ್ಕೆ ನನ್ನನ್ನು ಬಲಾತ್ಕಾರ ಮಾಡುತ್ತೀರೇನು?"[3] ಎಂದು ಸಿಟ್ಟಾಗುತ್ತಾಳೆ. ಈ ಕತೆಯಲ್ಲಿ ಹೆಣ್ಣು ಭೋಗದ ವಸ್ತುವೆಂದು ಭಾವಿಸಿದವರಿಗೆ ಹೆಣ್ಣಿಗೂ ಒಂದು ಮನಸ್ಸಿದೆ, ಅವಳ ಇಷ್ಟಾನಿಷ್ಟ ಕೇಳಬೇಕೆಂಬ ಸ್ತ್ರೀವಾದಿ ಧೋರಣೆ ಗುರುತಿಸಬಹುದಾಗಿದೆ.

**ಅಭಿಲಾಷೆ** ಎಂಬ ಕತೆಯಲ್ಲಿನ ಸೀತ ನೋಡಲು ಸುಂದರ, ಬುದ್ಧಿವಂತ ಹೆಣ್ಣಾಗಿದ್ದು ದುಡಿಯುವ ಹೆಣ್ಣಿನ ಬದುಕಿಗೊಂದು ಮೌಲ್ಯವಿದೆ ಎಂದು ಅರಿತು ನೌಕರಿಗೆ ಸೇರಿರುತ್ತಾಳೆ. ಅವಳ ಮನೆಯ ಕೆಲಸದ ನಂಜಿಯ ಗಂಡ ಕುಡಿದು ಬಂದು ನಂಜಿಗೆ ಹೊಡೆದು ಬಡಿದು ಮಾಡಿದಾಗ ನಂಜಿ 'ಯೆಣ್ಣಾಗಿ ಹುಟ್ಟೋದು ತಪ್ಪಾ? ಹೆಣ್ಣು ಎರಡು ತುತ್ತು ಅನ್ನಕ್ಕಾಗಿ ಈಟೆಲ್ಲ ಕಸ್ಟ ಅನುಭವಿಸ್ಬೇಕಾ?'[4] ಎಂದಾಗ

---

1. ತೆರೆ ಸರಿದಾಗ, ಪು. ೨೭
2. ತೆರೆ ಸರಿದಾಗ, ಪು. ೩೧
3. ತೆರೆ ಸರಿದಾಗ, ಪು. ೩೧
4. ತೆರೆ ಸರಿದಾಗ, ಪು. ೪೨

ಸೀತ 'ಹೆಣ್ಣಾಗಿ ಹುಟ್ಟಿದ್ದು ನಿನ್ನ ತಪ್ಪಲ್ಲ. ಆದರೆ ನೀನು ಗಂಡನ ಕೈಲಿ ಬಡಿಸ್ಕೊಂಡು, ಒದೆಸ್ಕೊಂಡು ಅವನ ಸ್ವಾಧೀನದಲ್ಲೇ ಬದುಕ್ತೀನೀಂತ ಹಠ ಹಿಡಿಯೋದು ತಪ್ಪು'[1] ಎಂದು ಬುದ್ಧಿ ಹೇಳುತ್ತಾಳೆ. ಪತಿಯೇ ಪರದೈವ, ಪತಿಯು ಎಷ್ಟೇ ಕಷ್ಟ ನೀಡಿದರೂ ಸಹಿಸಿಕೋ ಎಂಬ ಮಾತಿಗೆ ತಕ್ಕ ಉತ್ತರವಾಗಿ ಸೀತ ದಿಟ್ಟ ಉತ್ತರ ನೀಡುತ್ತಾಳೆ. ಆಧುನಿಕ ಚಿಂತನೆಯ ಸೀತ ನಿನ್ನ ಮಗಳು ಕಮಲಿನಾದ್ರು ಓದಿಸು 'ಪುಸ್ತಕಗಳನ್ನು ಓದೋದ್ರಿಂದ ಪ್ರಪಂಚ ಅರ್ಥವಾಗುತ್ತೆ. ತಿಳುವಳಿಕೆ ಬರುತ್ತೆ. ಯಾರಾದ್ರೂ ತುಳಿದ್ರೆ ಪ್ರತಿಭಟಿಸುವ ಧೈರ್ಯ ಬರುತ್ತೆ. ಇಲ್ಲದಿದ್ರೆ ಗಂಡಸರ ಕೈಲಿ ತುಳಿಸ್ಕೊಂಡೇ ಸಾಯಬೇಕಾಗುತ್ತೆ'[2] ಎಂದು ವಿದ್ಯೆಯ ಮಹತ್ವ ತಿಳಿಸುತ್ತಾಳೆ.

ಈ ಕತೆಯಲ್ಲಿ ಸ್ತ್ರೀಗೆ ಆರ್ಥಿಕ ಸ್ವಾತಂತ್ರ್ಯವು ಶೋಷಣೆ, ದಬ್ಬಾಳಿಕೆಯಿಂದ ಪಾರಾಗಲು ಮಾರ್ಗ ಎಂಬುದನ್ನು ಕತೆ ಕಟ್ಟಿಕೊಡುತ್ತದೆ. ಉದ್ಯೋಗಂ ಪುರುಷ ಲಕ್ಷಣಂ ಮಾತ್ರವಲ್ಲ ಸ್ತ್ರೀಯರಿಗೂ ಭೂಷಣ ಎಂಬ ಆಧುನಿಕ ಚಿಂತನೆಯನ್ನು ಇಲ್ಲಿ ಗುರುತಿಸಬಹುದು.

**'ಉಪಕಾರ'** ಎಂಬ ಕತೆಯಲ್ಲಿನ ಸಾರ್ವಜನಿಕ ಬ್ಯಾಂಕುಗಳಲ್ಲಿ ಗ್ರಾಹಕರನ್ನು ಗಮನಿಸದೇ ಹರಟೆ ಹೊಡೆಯುವವರನ್ನು ಕಂಡು ಮುದುಕರೊಬ್ಬರು "ರಾಷ್ಟ್ರೀಕರಣವಾಗೋದಕ್ಕೆ ಮೊದಲು ಬ್ಯಾಂಕುಗಳು ತುಂಬ ಚೆನ್ನಾಗಿ ಕೆಲಸ ಮಾಡ್ತಿದ್ವು. ಈಗ ಇವರನ್ನು ಕೇಳೋರಿಲ್ಲ, ಹೇಳೋರಿಲ್ಲ. ತಿಂಗಳ ಸಂಬಳ ಸಲೀಸಾಗಿ ಕೈಗೆ ಬೀಳುತ್ತೆ ಅಂದ ಮೇಲೆ ನಿಯತ್ತಿನಿಂದ ಕೆಲಸ ಮಾಡಿದ್ರೆಷ್ಟು ಬಿಟ್ಟರೆಷ್ಟು...'[3] ಎಂಬ ಮಾತುಗಳು ಸಂಬಳಕ್ಕೆ ತಕ್ಕ ಕೆಲಸ ಮಾಡದ ಇಂದಿನ ನೌಕರರ ಬಗೆಗೆ ಚಾಟಿ ಏಟಿನಂತಿದೆ.

---

1. ತೆರೆ ಸರಿದಾಗ, ಪು. ೪೨
2. ತೆರೆ ಸರಿದಾಗ, ಪು. ೪೨
3. ತೆರೆ ಸರಿದಾಗ, ಪು. ೪೬

**ಆಕೆ ಹೇಳಿದ ಕತೆ**ಯಲ್ಲಿ ಮಗುವಿಗಾಗಿ ಕೊರಗುತ್ತಿದ್ದ ದಂಪತಿಗಳು ವೈದ್ಯರ ಬಳಿ ತಪಾಸಣೆ ಮಾಡಿಸಿದಾಗ ಗಂಡನಿಗೆ ಸಮಸ್ಯೆ ಇರುವುದು ತಿಳಿಯುತ್ತದೆ. ಆದರೆ ಜನರಿಗೆ ಈ ಬಗ್ಗೆ ಅರಿವಿಲ್ಲದೇ ಹೆಂಡತಿಯನ್ನೇ ದೂಷಿಸುವಾಗ ಹೆಂಡತಿಯು ತಾಯ್ತನಕ್ಕಾಗಿ ಹಂಬಲಿಸುತ್ತಾಳೆ. ಆಗ ಗಂಡ ತನ್ನ ಗೆಳೆಯ ಅರವಿಂದನಿಂದ ನೀನು ತಾಯಾಗು ಎಂಬ ಸಲಹೆ ನೀಡುತ್ತಾನೆ, ಮಗುವಿಗಾಗಿ ಅನ್ಯ ಪುರುಷನ ಜೊತೆ ಇರಬೇಕೆಂಬ ಗಂಡನ ಸಲಹೆಯನ್ನು ತಿರಸ್ಕರಿಸಿದರೂ, ಗಂಡನ ಹೆಚ್ಚುತ್ತಿರುವ ಕುಡಿತದ ಚಟ ಬಿಡಿಸುವ ಸಲುವಾಗಿ ಕೊನೆಗೆ ಒಪ್ಪುತ್ತಾಳೆ. ಗಂಡು ಮಗನನ್ನು ಪಡೆಯುತ್ತಾಳೆ. ಆ ಮೂಲಕ ಗಂಡನಿಗೂ ತಂದೆಯ ಪಟ್ಟ ಸಿಗುವಂತೆ ಮಾಡುತ್ತಾಳೆ.

ಈ ಕತೆಯಲ್ಲಿ ತಾಯ್ತನಕ್ಕಾಗಿ ಹೆಣ್ಣು ಶೀಲ, ಮರ್ಯಾದೆ ಎಂದು ಕೊರಗದೆ, ಗಂಡನ ಒತ್ತಾಸೆಯಂತೆ ಪಾಲ್ಗೊಂಡು ಮಗು ಪಡೆಯಲು ವಿನೂತನ ಚಿಂತೆ ಇದ್ದರೂ, ಆ ಬಗ್ಗೆ ಅವಳಿಗೆ ಸಂಪೂರ್ಣ ಒಲವಿಲ್ಲ ಎಂಬುದು ವೇದ್ಯವಾಗುತ್ತದೆ.

**ಸಂಬಂಧಗಳು** ಕತೆಯಲ್ಲಿನ ಶಾಮಣ್ಣ ಹೆಂಡತಿಗೆ ತಮ್ಮ ಮಗ ಬೇರೆ ಜಾತಿಯವಳನ್ನು ಹೇಳದೆ ಕೇಳದೆ ಮದುವೆಯಾದ ಎಂಬ ನೋವಿರುತ್ತವೆ. ಆದರೆ ಶಾಮಣ್ಣನವರು "ಈಗಿನ ಕಾಲದ ಹುಡುಗರು, ಹುಡುಗಿಯರು ಪರಸ್ಪರ ಮೆಚ್ಚಿ ಮದುವೆಯಾಗ್ಬೇಕೂಂತ ಆಸೆ ಪಡ್ತಾರೆ. ಜೀವನ ಸಂಗಾತಿಯನ್ನು ಆಯ್ಕೆ ಮಾಡುವ ಹಕ್ಕು, ಸ್ವಾತಂತ್ರ್ಯ ಎಲ್ಲರಿಗೂ ಇರಬೇಕು. ಮದುವೆಗೆ ಮೊದಲೆ ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗ್ತೀನಿಂದ ಸುರೇಶ ಹೇಳಿದ್ರೆ ನಾವು ಖಂಡಿತ ಒಪ್ತಿರಲಿಲ್ಲ. ಅದಕ್ಕೇ ಅವನು ನಮಗೆ ತಿಳಿಸದೆ ಮದುವೆಯಾದ."[1] ಎಂದು ಹೆಂಡತಿಯನ್ನು ಸಮಾಧಾನಪಡಿಸುತ್ತಾರೆ.

ಮದುವೆಯ ಆಯ್ಕೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯ ಮುಖ್ಯ ಎಂಬುವ ಆಧುನಿಕ ಧೋರಣೆ ಇಲ್ಲಿ ವ್ಯಕ್ತವಾಗಿದೆ.

---

8. ತೆರೆ ಸರಿದಾಗ, ಪು. ೯೪

**'ವಧುಪರೀಕ್ಷೆ'**ಯಲ್ಲಿ ಚಾರುಲತಾ ಎಂಬ ಹೆಣ್ಣು ಕಪ್ಪಗಿದ್ದು ಬಂದ ವರಗಳೆಲ್ಲ ಅವಳನ್ನು ತಿರಸ್ಕರಿಸುವ ಸಮಯದಲ್ಲಿ ಮೋಹನ ಎಂಬ ವ್ಯಕ್ತಿ ವಧುಪರೀಕ್ಷೆಗೆ ಬಂದು ಚಾರುಲತಾಳನ್ನು ಒಪ್ಪುತ್ತಾನೆ. ಜೊತೆಗೆ ಗಂಡು ಮಾತ್ರ ಒಪ್ಪಿದ್ರೆ ಸಾಕಾಗಲ್ಲ ಹೆಣ್ಣು ಕೂಡ ಒಪ್ಪಬೇಕೆಂದು ಬಯಸುತ್ತಾನೆ. ಮದುವೆಯು ಆಡಂಬರವಾಗಿರದೆ ಸರಳವಾಗಿರಬೇಕೆಂದು ಬಯಸುತ್ತಾನೆ. "ಛತ್ರ, ವರದಕ್ಷಿಣೆ, ವರೋಪಚಾರ, ಅದ್ದೂರಿ ಮದುವೆ ಯಾವುದೂ ಬೇಡ. ಮದುವೆಗೆ ನನ್ನ ಸ್ನೇಹಿತರು ಐದಾರು ಜನ ಬರ್ತಾರೆ."[1] "ಮದುವೆ ಮುಂಜಿ ಅಂತ ಹಣ ಖರ್ಚು ಮಾಡೋದ್ರಲ್ಲಿ ಅರ್ಥವಿಲ್ಲ....ಆದ್ರೆ ನಂಗೆ ಏನೂ ಬೇಡ. ಪರಸ್ಪರ ಹಾರ ಬದಲಾಯಿಸಿಕೊಂಡು ಮಾಂಗಲ್ಯ ಕಟ್ತೀನಿ.... ಮದುವೆ ಹೇಗಾಯ್ತು ಅನ್ನೋದಕ್ಕಿಂತ ಮುಂದೆ ಗಂಡು, ಹೆಣ್ಣು ಸುಖವಾಗಿ ಸಂಸಾರ ಮಾಡೋದು ಮುಖ್ಯ ಅಲ್ಲವೇ?[2] ಎಂದು ಎಲ್ಲರೂ ಬೆರಗಾಗುವಂತೆ ನುಡಿಯುತ್ತಾನೆ.

ಈ ಕತೆಯಲ್ಲಿ ಕತೆಗಾರ್ತಿಯವರು ಆಡಂಬರದ ಒಂದು ದಿನದ ಖರ್ಚಿಗಾಗಿ ಸಾಲ ಸೋಲ ಮಾಡಿ ದುಂದುವೆಚ್ಚ ಮಾಡುವುದನ್ನು ವಿರೋಧಿಸಿ ಹೇಗೆ ಮದುವೆಯಾದರು ಎನ್ನುವುದಕ್ಕಿಂತ ಹೇಗೆ ಬಾಳಿದರು ಎಂಬುವುದು ಮುಖ್ಯ ಎಂದು ಈ ಕತೆಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಜೊತೆಗೆ 'ಸರಳ ವಿವಾಹ'ದ ಬಗ್ಗೆ ಪ್ರೋತ್ಸಾಹಕದ ರೀತಿಯಲ್ಲಿ ಕತೆ ಮೂಡಿ ಬಂದಿದೆ.

**ಅತೀಂದ್ರಿಯ** ಎಂಬ ಕತೆಯಲ್ಲಿ ಹಜಾರದಲ್ಲಿ ಅತ್ತಿಂದಿತ್ತ ಹೆಜ್ಜೆ ಹಾಕುತ್ತಿದ್ದ ದಾದ ಸಿಟ್ಟಾಗಿದ್ದರು. ನಿಧಾನವಾಗಿ ಹರಿಯುತ್ತಿದ್ದ ನದಿಗೆ ಇದ್ದಕ್ಕಿದ್ದಂತೆ ಪ್ರವಾಹ ಬಂದಂತಾಗಿತ್ತು. ಮನೆಯಲ್ಲಿ ಯಾರೂ ಇರಲಿಲ್ಲ. ಆಗ ತಾನೆ ಮಗ ಜಗಳವಾಡಿ ಹೊರಗೆ ಹೋಗಿದ್ದ. ನಡೆದ ಘಟನೆ ಅವರ ಮನಸ್ಸಿನ ಶಾಂತಿಯನ್ನು ಕದಡಿತ್ತು. ಶಶಿ ದಾದಾಗೆ ಒಬ್ಬನೇ ಮಗ, ಇಬ್ಬರು ಹೆಣ್ಣು ಮಕ್ಕಳೂ

---

1. ಮರಳಿ ಬಂದ ಮಮತೆ
2. ವಧು ಪರೀಕ್ಷೆ, ಮರಳಿ ಬಂದ ಮಮತೆ

ಮದುವೆಯಾಗಿ ಗಂಡನ ಮನೆಯಲ್ಲಿ ಸಂಸಾರ ಮಾಡಿಕೊಂಡಿದ್ದು ಮಕ್ಕಳಿಗೆ ತಾಯಿಯಾಗಿದ್ದರು. ಅವರ ಚಿಂತೆ ದಾದಾಗಿರಲಿಲ್ಲ, ಮಗ ಓದು ಮುಗಿಸಿ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದ. ಆ ವರ್ಷ ಅವನಿಗೆ ಮದುವೆ ಮಾಡಬೇಕೆಂದು ತೀರ್ಮಾನಿಸಿದ್ದರು.

ಬ್ಯಾಂಕಿನಿಂದ ಸಂಜೆ ಹಿಂತಿರುಗುವ ಮಗನನ್ನೇ ನಿರೀಕ್ಷಿಸುತ್ತಾ ದಾದ ಹಜಾರದಲ್ಲಿ ಕುಳಿತಿದ್ದರು. ಮಗನಲ್ಲಿ ಅವರಿಗೆ ತುಂಬ ಪ್ರೀತಿಯಿತ್ತು. ತಂದೆಯಲ್ಲಿ ಶಶಿಗೂ ಸಲಿಗೆಯಿತ್ತು. ಇಬ್ಬರೂ ಸ್ನೇಹಿತರಂತಿದ್ದರು. ಹೆಂಡತಿ ಸತ್ತ ಮೇಲೆ ಮತ್ತಷ್ಟು ಆತ್ಮೀಯರಾಗಿದ್ದರು. ಒಟ್ಟಾಗಿ ಕುಳಿತು ತಿಂಡಿ ತಿನ್ನುವುದು, ಊಟ ಮಾಡುವುದು, ಒಮ್ಮೊಮ್ಮೆ ಹೊರಗೆ ಸುತ್ತಾಡುವುದು ನಿತ್ಯದ ಪದ್ಧತಿಯಾಗಿತ್ತು. ಅಂದು ಮನೆಗೆ ಶಶಿ ಸ್ವಲ್ಪ ತಡವಾಗಿ ಬಂದ. ಇಬ್ಬರೂ ಜೊತೆಯಾಗಿ ಕಾಫಿ ಕುಡಿದರು, ಇದ್ದಕ್ಕಿದ್ದಂತೆ ಶಶಿ ತಂದೆಯ ಕಡೆಗೂ ನೋಡ ಹೇಳಿದ. "ದಾದಾ, ನಿಮಗೊಂದು ವಿಷಯ ಹೇಳ್ಬೇಕಿತ್ತು." "ಅದೇನು ಹೇಳು" "ನಾನು ಲಕ್ಷ್ಮೀನ ಮದುವೆಯಾಗ್ಬೇಕೂಂತ ತೀರ್ಮಾನಿಸಿದ್ದೇನೆ." "ಲಕ್ಷ್ಮೀ ! ಯಾರವಳು?" "ಅವಳೂ ತುಂಬ ಒಳ್ಳೆ ಹುಡುಗಿ ನಮ್ಮ ಬ್ಯಾಂಕಿನಲ್ಲೆ ಕೆಲಸ ಮಾಡ್ತಾಳೆ."[1]

ಬೆಳ್ಳಗೆ ತೆಳ್ಳಗಿದ್ದ ಮಾತ್ರಕ್ಕೆ ಅವಳು ಸುಂದರಿ, ಒಳ್ಳೆ ಹುಡುಗಿ ಅಂತ ತೀರ್ಮಾನಿಸಿದ್ಯಾ? ಅವಳ ಜಾತಿ ಯಾವುದು? ನಮ್ಮ ಜಾತಿಯವಳಲ್ಲ. ಅವಳಿಗೆ ತಂದೆಯಿಲ್ಲ, ತಾಯಿ ಆಸ್ಪತ್ರೇಲಿ ಕೆಲಸ ಮಾಡ್ತಾರೆ. ಜಯ ನಿನ್ನ ಹೆಂಡತಿ ಅಂತ ಎಂದೊ ತೀರ್ಮಾನಿಸಿದ್ದಿನಿ, ಜಯ ಮಾವನ ಮಗಳು ಅಷ್ಟೇ. ಎಂದೂ ಆ ದೃಷ್ಟಿಯಲ್ಲಿ ನಾನು ಅವಳನ್ನು ನೋಡಿಲ್ಲ. ನಗರದ ನಯ ನಾಜೂಕು ತಿಳಿಯದ ಅವಳನ್ನು ಮದುವೆಯಾಗೋದು ನನಗೆ ಇಷ್ಟವಿಲ್ಲ, ಲಕ್ಷ್ಮೀನ ನಾನು ಪ್ರೀತಿಸ್ತೀನಿ." "ಪ್ರೀತಿಯಂತೆ ಪ್ರೀತಿ, ನಾವೆಲ್ಲ ಪ್ರೀತಿಸಿ ಮದುವೆಯಾದ್ವೇನು? ಸಂಸಾರ ಮಾಡಲಿಲ್ವೆ? ನಾನು ನಿನ್ನ ತಂದೆ ನಾನು ಹೇಳಿದಂತೆ ಕೇಳು. ಜಯಾನ ಮದುವೆಯಾಗು. ಲಕ್ಷ್ಮಿ ವಿದ್ಯಾವಂತೆ...." ಅದೇ ಹಾದಿಯಲ್ಲಿ ಶಶಿ

---

1. ಆರ್ಯಾಂಬ ಪಟ್ಟಾಭಿ, ಮರಳಿ ಬಂದ ಮಮತೆ, ಪು. ೧೪

ಮತ್ತೊಂದು ಹೆಜ್ಜೆಯಿಟ್ಟ. ಈಗಿನ ಕಾಲದಲ್ಲಿ ವಿದ್ಯಾವಂತ ಹೆಣ್ಣು ಮಕ್ಕಳಿಗೆ ಬರವೇ ಹೊರತು ವಿದ್ಯಾವಂತರ ಕಾಸಿಗೊಂದು ಕೊಸರಿಗೊಂದು ಸಿಕ್ತಾರೆ. "ನೋಡುವುದಕ್ಕೂ ಚೆನ್ನಾಗಿದ್ದಾಳೆ. "ಬಿಸಿರಕ್ತದ ತರುಣ ನೀನು ಕಪ್ಪು ಕಾಗೆಯೂ ಸುಂದರವಾಗಿ ಕಂಡ್ರೆ ಆಶ್ಚರ್ಯವಾಗಿಲ್ಲ..."

"ಅವಳನ್ನು ಮದುವೆಯಾಗೋದು ಅಂತ ನಿಶ್ಚಯಿಸಿದ್ದೀನಿ. ನನ್ನ ಜೀವನ ಸಂಗಾತಿಯನ್ನು ಆಯ್ಕೆ ಮಾಡೋ ಸ್ವಾತಂತ್ರ್ಯ ನನಗಿಲ್ಲವೆ?" ಶಶಿ ಅಸಹನೆಯಿಂದ ಸವಾಲು ಹಾಕಿದ.

"ಬಾಯಿ ಮುಚ್ಚಿಕೊಂಡು ನಾನು ಹೇಳಿದ ಹಾಗೆ ಕೇಳು, ಜಯಾನ ಮದುವೆಯಾಗಿ ಸುಖವಾಗಿರು." "ನೀವೇನು ಹೇಳಿದ್ರೂ ಅಷ್ಟೆ. ನಾನು ಲಕ್ಷ್ಮೀನೆ ಮದುವೆಯಾಗೋದು". "ಅವಳು ನನ್ನ ಸೊಸೆಯಾಗೋದು ಸಾಧ್ಯವಿಲ್ಲ, ಅವಳನ್ನು ಮದುವೆಯಾದ್ರೆ ನೀನು ಈ ಮನೆ ಬಿಟ್ಟು ಹೋಗ್ಬೇಕಾಗುತ್ತೆ" ದಾದ ಸಿಟ್ಟಿನಿಂದ ಘರ್ಜಿಸಿದರು. ಶಶಿ ತಂದೆಯ ಮಾತಿಗೆ ಬೆಚ್ಚಿದ. ಅವರು ಅವನನ್ನು ತಂದೆ ತಾಯಿ ಎರಡೂ ಸ್ಥಾನದಲ್ಲಿ ನಿಂತು ಸಾಕಿದ್ದರು. ಅವರಿಂದ ದೂರವಾಗಿ ಬದುಕುವುದು ಅವನಿಗೂ ಬೇಡವಾಗಿತ್ತು. ಲಕ್ಷ್ಮಿಯನ್ನು ಮರೆತು ಮತ್ತೊಬ್ಬಳ ಕೈಹಿಡಿಯುವುದು ಸಾಧ್ಯವಿಲ್ಲವಾಗಿತ್ತು. ಪ್ರೀತಿ, ಪ್ರೇಮ, ವಿವಾಹ ಅವನಿಗೆ ಆದರ್ಶವಾಗಿತ್ತು. ಬಹುದಿನಗಳಿಂದ ಬಚ್ಚಿಟ್ಟುಕೊಂಡಿದ್ದ ಮದುವೆಯ ವಿಷಯವನ್ನು ತಂದೆಗೆ ತಿಳಿಸಿದ್ದ. ಅವರ ಪ್ರತಿಕ್ರಿಯೆಯಿಂದ ನಿರಾಶೆಯಾಯಿತು, ನೋವಾಯಿತು, ಕೈಯೆತ್ತಿ ಕಪಾಳಕ್ಕೆ ಹೊಡೆದಿದ್ದರೂ ತಂದೆಯಾಡಿದ ಮಾತು ನೇರವಾಗಿ ಹೃದಯವನ್ನು ಘಾಸಿಗೊಳಿಸಿತು.

ಶಶಿ ಸ್ಕೂಟರ್ ಹತ್ತಿ ಮನೆಯಿಂದ ಹೊರಟ ನಂತರ ಒಂಟಿಯಾಗಿದ್ದ ದಾದ ತಮಗೆ ತಾವೇ ಮಾತಾಡಿಕೊಂಡರು "ಶಶಿ ಹೀಗೆ ಮಾಡಬಹುದೆ? ಯಾರನ್ನೋ ಪ್ರೀತಿಸಿ ಸೋದರ ಮಾವನ ಮಗಳು ಜಯಾಗೆ ಅನ್ಯಾಯ ಮಾಡುವುದು ಸರಿಯೆ? ಅಯೋಗ್ಯ, ಮುಠ್ಠಾಳ, ಈಗಿನ ಕಾಲದ ಮಕ್ಕಳಿಗೆ ತಂದೆ ತಾಯಿ, ಗುರು ಹಿರಿಯರಲ್ಲಿ ಭಕ್ತಿ ಗೌರವಗಳಿಲ್ಲ. ಶಶಿ ಎಲ್ಲರಂತಲ್ಲ, ತಂದೆ ಹಾಕಿದ ಗೆರೆ ದಾಟುವವನಲ್ಲ ಎಂದು ನಂಬಿದ್ದು ಸುಳ್ಳಾಯಿತೇ? ದಾದ ಕಾರಿನಲ್ಲಿ ಮನೆಯಿಂದ ಹೊರಟರು.

ಈಗಿನ ಕಾಲದಲ್ಲಿ ಮಕ್ಕಳಿಂದ ನಾವು ಏನನ್ನು ನಿರೀಕ್ಷಿಸಬಾರದು. ಅವರನ್ನೇನಾದರೂ ಪ್ರಶ್ನಿಸಿದರೆ, "ನಾನೇನು ನಿನಗೆ ಜನ್ಮ ಕೊಡು ಅಂತ ಹೇಳಿದ್ನ, ನಿಮ್ಮ ಕರ್ತವ್ಯ ನೀವು ಮಾಡಿದಿರಿ ಎಂದೆಲ್ಲಾ ನಮ್ಮನ್ನು ಪ್ರಶ್ನಿಸುತ್ತಾರೆ. ಹಾಗಾಗಿ ದಾದ ಮೇಲಿನಂತೆ ತನ್ನ ಮಗ ಶಶಿಯ ಬಗ್ಗೆ ಈ ರೀತಿ ಯೋಚಿಸುವುದು ಸರಿಯಲ್ಲ ಎಂದುಕೊಳ್ಳುತ್ತಾರೆ.

ಲಲಿತ ದಾದರ ಗೆಳೆಯನ ತಂಗಿ. ಪರಸ್ಪರ ಪ್ರೀತಿಸಿ ಮದುವೆಯಾಗಲು ತೀರ್ಮಾನಿಸಿದ್ದರು. ಆದರೆ ಮದುವೆಗೆ ದಾದಾ ತಂದೆ ಸಮ್ಮತಿಸಲಿಲ್ಲ. ತಂದೆ ಆಯ್ಕೆ ಮಾಡಿದವಳು ದಾದಾರ ಪತ್ನಿಯಾದಳು. ಮೊದಲು ಮದುವೆಯಾದದ್ದು ಲಲಿತಳಿಗೆ. ಆ ವಿಷಯ ತಿಳಿದ ದಾದ ಸನ್ಯಾಸಿಯಾಗುವ ನಿರ್ಧಾರ ಮಾಡಿದರು. ಯಾಕೆಂದರೆ ಅವರ ಮನಸ್ಸಿನಲ್ಲಿದ್ದ ಹುಡುಗಿ ಲಲಿತ, ಎರಡು ವರ್ಷಗಳ ನಂತರ ತಂದೆಯ ಬಲವಂತಕ್ಕೆ ಒಪ್ಪಿ ಮತ್ತೊಂದು ಹೆಣ್ಣಿನ ಕೊರಳಿಗೆ ತಾಳಿ ಕಟ್ಟಿದರು. ಮೂರು ಮಕ್ಕಳಾದರು ಲಲಿತಾಳನ್ನು ಮರೆತಿರಲಿಲ್ಲ. ಅವಳ ನೆನಪು ಅವರ ಹಿಂದೆ ಮುಂದೆ ಸುತ್ತುತ್ತಲೇ ಇತ್ತು. ಕಾಲ ಸವೆದಂತೆ ಅವಳ ನೆನಪು ಮಾಸಿ ಹೋಯಿತು. ಆದರೆ ಆ ದಿನ ಅಂಗಡಿಯಲ್ಲಿ ಲಲಿತಳನ್ನು ನೋಡಿ ಹಿಂದಿನದೆಲ್ಲಾ ನೆನಪಾಯಿತು. ಹಳೆಯ ನೋವು ಮರುಕಳಿಸಿತು.

"ನೀನು ಈಗ ಇದೇ ಊರಿನಲ್ಲಿದ್ದೀಯಾ ಲಲಿತ? ದಾದ ಕೇಳಿದರು. "ಮೊದಲು ಮದ್ರಾಸಿನಲ್ಲಿದ್ದೆ, ಈಗ ಎರಡು ವರ್ಷಗಳಿಂದ ಈ ಊರಿನಲ್ಲೆ ಇರೋದು ಮಗನಿಗೆ ಇಲ್ಲೇ ಕೆಲಸ.[1]

ಅನಂತರ ಅಲ್ಲಿಂದ ಮನೆಗೆ ದಾದಾ ಬರುತ್ತಾರೆ. ಶಶಿ ಇನ್ನೂ ಮನೆಗೆ ಬಂದಿರಲಿಲ್ಲ. ಊಟವನ್ನು ಮಾಡದೆ ಮಗನಿಗಾಗಿ ಕಾದರು, ಹೊರಗಡೆ ಸ್ಕೂಟರ್ ಸದ್ದು ಕೇಳಿಸಿ ತಾವೇ ಬಾಗಿಲು ತೆಗೆದು ಒಟ್ಟಾಗಿ ಕುಳಿತು ಊಟ ಮಾಡಿದರು. ಮಾತಿಲ್ಲ ಕಥೆಯಿಲ್ಲ. ಮಲಗಲು ಹೋಗುತ್ತಿದ್ದ ಮಗನನ್ನು

---

1. ಮರಳಿ ಬಂದ ಮಮತೆ, ಪು. ೧೬

ದಾದ ಕರೆದು ಕೇಳಿದರು. ನಿನಗೆ ಶರ್ಟ್ ತಂದಿದ್ದೇನೆ ಇಷ್ಟವಾಯಿತೆ. ಶಶಿ ಶರ್ಟ್ ನೋಡಿ ಹುಂ ಎಂದ. ಚೀಲದಲ್ಲಿ ಮೈಸೂರು ಪಾಕ್ ಇದೆ ತಗೊಂಡು ಬಾ ತಿನ್ನೋಣ. ದಾದಾರ ಮಾತಿನಲ್ಲಿ ಲವಲವಿಕೆ ಇತ್ತು. ಉತ್ಸಾಹ ಉಕ್ಕಿಉಕ್ಕಿ ಹರಿಯುತ್ತಿತ್ತು. ಮಧ್ಯಾಹ್ನ ಮಾತ್ರ ತನ್ನ ಮಗನೊಡನೆ ಮದುವೆಯ ವಿಷಯದಲ್ಲಿ ಜಗಳವಾಡಿ ಸಿಟ್ಟಿನಿಂದ ಕೂಗಾಡಿದ್ದರು. ಆದರೆ ಈಗ ಮಾತ್ರ ಮುಖ ಶಾಂತವಾಗಿತ್ತು. ಶಶಿ, ಇಲ್ಲಿ ಬಾ ಕೂತ್ಕೊ, ಶಶಿ ಬಂದು ಕುಳಿತ. ನೀನು ಆ ಹುಡುಗಿಯ ನಿಜವಾಗಿಯೂ ಪ್ರೀತಿಸ್ತೀಯಾ? ಮಗ ಭಯದಿಂದ ಕತ್ತಾಡಿಸಿದ, ಆ ಹುಡುಗಿ ಹೆಸರೇನು? 'ಲಕ್ಷ್ಮೀ' ಶಶಿ ತಲೆ ತಗ್ಗಿಸಿ ಹೇಳಿದ. ನಾಳೆ ಅವಳನ್ನು ಮನೆಗೆ ಕರ್ಕೊಂಡು ಬಾ. ಮಗನಿಗೆ ಆಶ್ಚರ್ಯ ಕಣ್ಣುಗಳನ್ನು ಮಿಟಕಿಸಿ ತಂದೆಯನ್ನು ನೋಡಿ, ನಾಳೆ ಕರ್ಕೊಂಡು ಬರ್ತೀನಿ ಎಂದ. ಶಶಿಯ ಮುದುಡಿದ ಮುಖ ಅರಳಿದ ತಾವರೆಯಾಯಿತು. ದಾದಾರು ಅಂದು ಲಲಿತಾಳ ತಂದೆ ಒಪ್ಪಿದ್ದರೆ ನನ್ನ ಮತ್ತು ಲಲಿತಳ ಮದುವೆ ಆಗಿರುತ್ತಿತ್ತು. ನಾನು ನನ್ನ ಮಗನ ಪ್ರೀತಿಗೆ ಏಕೆ ಕಲ್ಲಾಕಬೇಕು. ಅವನಾಸೆ ನೆರವೇರಿಸುವುದು ನನ್ನ ಕರ್ತವ್ಯ ಎಂದು ಯೋಚಿಸಿ ಮದುವೆಗೆ ಸಮ್ಮತಿಸಿದರು.

ಶಶಿಯ ಮನಸ್ಸಿಗೆ ಸಂತೋಷವಾದರೂ ಅಪ್ಪನ ಬದಲಾದ ನಡವಳಿಕೆಗೆ ಕಾರಣ ತಿಳಿಯಲೇ ಇಲ್ಲ, ತಿಳಿದುಕೊಳ್ಳುವ ಪ್ರಯತ್ನವನ್ನೂ ಮಾಡದೇ ಕುಣಿತದ ನಡಿಗೆಯಲ್ಲಿ ರೂಮಿಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡ. ದಾದ ಅಂಥ ನೆಮ್ಮದಿ ಸುಖವನ್ನು ಹಿಂದೆಂದೂ ಅನುಭವಿಸಿರಲಿಲ್ಲ. ದಾದ ಹಿಂದೆಂದೂ ಅನುಭವಿಸದ ನೆಮ್ಮದಿ ಸಂತೋಷದಿಂದ ಮಲಗಿದರು.

ಈ ಕತೆಯಲ್ಲಿ ಹಿರಿಯರು ಪ್ರಾಯದ ಮಕ್ಕಳ ಆಸೆಯನ್ನು ಅರಿತು ನೆರವೇರಿಸಬೇಕೆಂಬ ಸೂಚನೆ ಇದೆ. ಜೊತೆಗೆ ಪ್ರೀತಿ ಪ್ರೇಮದ ನೆಪದಲ್ಲಿ ಹಿರಿಯರ ಮನಸ್ಸನ್ನು ಘಾಸಿಗೊಳ್ಳುವುದನ್ನು ಕಂಡರೂ ಹಿರಿಯರು ಮಕ್ಕಳ ಆಸೆಗೆ ಅಡ್ಡಿಯಾಗಬಾರದೆಂಬ ಅರ್ಥವಿದೆ.

**ಒಪ್ಪಂದ** ಮನೆಯ ಮುಂದೆ ಆಟೋರಿಕ್ಷ ಸದ್ದು ಕೇಳಿಸಿತು. ನೀಲಮ್ಮ ಕುತೂಹಲದಿಂದ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಕಿಟಕಿಯ ಮೂಲಕ ರಸ್ತೆಯ ಮೇಲೆ ಕಣ್ಣೋಡಿಸಿದರು. ಬರುತ್ತಿದ್ದ ಮಗಳನ್ನು ನೋಡಿ ಮುಖ ಅರಳಿತು. ಆದರೆ ಅಳಿಯನನ್ನು ಕಾಣದೆ ನಿರಾಶೆಯಾಯಿತು. "ಶೀಲು, ಇದ್ದಕ್ಕಿದ್ದಂತೆ ಬಂದು ಬಿಟ್ಟೆ? ಒಬ್ಬಳೆ ಬಂದ್ಯಾ?" "ಒಬ್ಬಳೆ ಬರದೆ ನಮ್ಮೂರಿನವರನ್ನೆಲ್ಲ ಕಟ್ಟಿಕೊಂಡು, ಬರಬೇಕಾಗಿತ್ತೇನು?" ಶೀಲ ಸಿಡುಕಿದಳು. ಸಾಮಾನ್ಯವಾಗಿ ಅವಳಾಡುತ್ತಿದ್ದ ಮಾತುಗಳು ಒರಟಾಗಿರುತ್ತಿದ್ದವು.[1]

ನಯ ನಾಜೋಕು, ಸವಿನಯದ ನಡವಳಿಕೆ ಅವಳಿಗೆ ಅಪರಿಚಿತವಾಗಿದ್ದವು. ನಿನ್ನ ಗಂಡ ಬರಲಿಲ್ಲವೆ? ಇನ್ನೂ ಏನೇನೋ ಪ್ರಶ್ನಿಸಿದಳು ತಾಯಿ. ಆದರೆ ಮಗಳು ಇದಾವುದಕ್ಕೂ ಸರಿ ಉತ್ತರ ಕೊಡದೆ ತುಂಬ ಹಸಿವಾಗ್ತಿದೆ, ಅಡಿಗೆಯಾಗಿದ್ರೆ ಬಡಿಸು ಊಟ ಮಾಡಿ ಮಲಗ್ತೀನಿ ಆಯಾಸವಾಗಿದೆ ಎಂದಳು. ಆದರೆ ಒಂಟಿಯಾಗಿ ಗಂಡನ ಮನೆಯಿಂದ ಹಿಂತಿರುಗಿದ ಮಗಳ ಬಗ್ಗೆ ಜಯಮ್ಮ ಯೋಚನಾ ಮಗ್ನರಾದರು. ಏಕೆಂದರೆ ಹೆತ್ತು ಇಪ್ಪತ್ತೆರಡು ವರ್ಷ ಸಾಕಿದ ಮಗಳ ಸ್ವಭಾವ ಆಕೆಗೆ ತಿಳಿದಿತ್ತು. ದುಡುಕು ಸ್ವಭಾವ, ಚಂಚಲಬುದ್ಧಿ ಕಂಡದ್ದೆಲ್ಲ ಕೊಳ್ಳಬೇಕೆಂಬ ಚಪಲ. ಶೀಲ ಮದುವೆಯಾದ ಹತ್ತು ವರ್ಷವಾದ ಮೇಲೆ ಹುಟ್ಟಿದವಳು. ಹಾಗಾಗಿ ತಂದೆತಾಯಿಗೆ ಅವಳ ಮೇಲೆ ಇನ್ನಿಲ್ಲದ ಪ್ರೀತಿ, ಮುದ್ದಿನ ಪರಿಣಾಮ ಹಠಮಾರಿಯಾಗಿದ್ದಳು. ತಂದೆಗೆ ಮಾತ್ರ ಅವಳ ಬುದ್ಧಿ ಇಷ್ಟವಾಗುತ್ತಿರಲಿಲ್ಲ. ಅಷ್ಟೇ ಏಕೆ ತನ್ನ ಹೆಂಡತಿಗೂ ಅವನು ಸ್ವತಂತ್ರ ಕೊಟ್ಟವನಲ್ಲ. ಮದುವೆಯಾದ ದಿನದಿಂದಲೂ ಆಕೆ ನೆಮ್ಮದಿಯ ಬಾಳು ಕಂಡಿರಲಿಲ್ಲ. ಮಗಳು ಹುಟ್ಟಿದಾಗ ಮನೆಯವರಿಗೆಲ್ಲಾ ನಿರಾಶೆಯಾಗಿದ್ದರೂ ಆಕೆಗೆ ಮಾತ್ರ ಕತ್ತಲ ಪ್ರಪಂಚದಲ್ಲಿ ಮಿಂಚಿನ ಬಳ್ಳಿ ಕಂಡಂತಾಗಿತ್ತು. ಅವಳಿಗೆ ಕೇಳಿದ್ದೆಲ್ಲ ಕೈಲಿಟ್ಟು ಮುದ್ದಿಸುತ್ತಿದ್ದಳು. ಪದವೀಧರೆಯಾದ ಶೀಲಳನ್ನು ರವಿ ಎಂಬ ವರನಿಗೆ ಮದುವೆ ಮಾಡಿಕೊಟ್ಟರು.

1. ಆರ್ಯಾಂಬ ಪಟ್ಟಾಭಿ, ಮರಳಿ ಬಂದ ಮಮತೆ, ಪು. ೧೮

ಮದುವೆಯಾದ ಮೇಲೂ ಕೆಲಸ ಮಾಡುತ್ತೇನೆ ಅದಕ್ಕೆ ನೀವು ಬೇಡವೆನ್ನಬಾರದು ಎನ್ನುವ ಷರತ್ತನ್ನೂ ಹಾಕಿದ್ದಳು. ಅದಕ್ಕೆ ಹಸಿರು ನಿಶಾನೆ ತೋರಿಸಿದ್ದ ರವಿ. ಆದರೆ ಅವಳ ಅತ್ತೆ ಮಾವ ಕೆಲಸಕ್ಕೆ ಹೋಗುವುದು ಬೇಡವೆಂದರು. ಮಗ ಸೊಸೆಯೊಡನೆ ಮಾಡಿಕೊಂಡಿರುವ ಒಪ್ಪಂದ ತಿಳಿಯದು. ಇದರಿಂದ ಮನೆಯ ಶಾಂತ ವಾತಾವರಣ ಕಲುಷಿತಗೊಂಡಿತು. ಗಂಡ ಹೆಂಡಿರಲ್ಲಿ ಬಿರುಕು ಕಾಣಿಸಿತು. ಇನ್ನು ಐದು ವರ್ಷ ಮಕ್ಕಳು ಬೇಡ ಮಕ್ಕಳಾದ್ರೆ ನನ್ನ ಕೆಲಸಕ್ಕೆ ತೊಂದರೆ ಎಂದು ಶೀಲ ಹಠ ಹಿಡಿದಳು. ಆದರೆ ರವಿಯ ತಂದೆ ತಾಯಿಗೆ ಮೊಮ್ಮಗುವನ್ನೆತ್ತಿ ಆಡಿಸುವ ಚಪಲ.

ನನ್ನ ಮಾತಿಗೆ ಬೆಲೆಯಿಲ್ಲದ ಮೇಲೆ ಗಂಡ, ಅತ್ತೆ, ಮಾವಂದಿರು ಹೇಳಿದಂತೆ ನಾನೇಕೆ ಕೇಳಬೇಕು? ನಾನು ಏನೂ ತಿಳಿಯದ ಮಗುವಲ್ಲ. ಇಪ್ಪತ್ನಾಲ್ಕು ವರ್ಷದ ವಿದ್ಯಾವಂತ ತರುಣಿ, ಸಾವಿರಾರು ವಿದ್ಯಾರ್ಥಿಗಳಿಗೆ ಬೋಧಿಸುವ ಶಿಕ್ಷಕಿ? ಇವರೆಲ್ಲ ಹೇಳಿದಂತೆ ಕೇಳಲು ನಾನೇನು ಕೀ ಕೊಟ್ಟರೆ ಕುಣಿಯುವ ಬೊಂಬೆಯೆ? ನನ್ನ ಬಾಳು ಅಮ್ಮನಂತಾಗಬಾರದು"[1] ಎಂದು ಯೋಚಿಸಿ ತಾನೆ ಮನಸ್ಸಿನಲ್ಲಿ ಏನೋ ಯೋಚಿಸಿ ತಂದೆಯ ಮನೆಗೆ ಬಂದಳು. ಆದರದಿಂದ ಸ್ವಾಗತಿಸಿದ ತಂದೆ ತಾಯಿಗಳು ಅವಳನ್ನು ಪ್ರೀತಿಯಿಂದ ನೋಡಿಕೊಂಡರು.

ಅನಂತರ ಸ್ವಲ್ಪ ದಿನದಲ್ಲಿ ಗಂಡ ಅವಳ ತಂದೆ ಮನೆಗೆ ಬಂದ. ಅಳು ಮೋರೆಯಲ್ಲಿ ಸ್ವಾಗತಿಸಿದ ಶೀಲ ಪ್ರಶ್ನಿಸುವ ಮುನ್ನವೆ ನಡೆ ನಮ್ಮ ಮನೆಗೆ ಎಂದಾಗ, ನಾನು ಕೆಲಸಕ್ಕೆ ಹೋಗುವುದು ನಿಮ್ಮಪ್ಪ ಅಮ್ಮರಿಗೆ ಸ್ವಲ್ಪವೂ ಇಷ್ಟವಿಲ್ಲ. ನಾನು ನಿಮ್ಮೊಂದಿಗೆ ಈ ಒಪ್ಪಂದದ ಮೇಲೆ ನಿಮ್ಮನ್ನೊಪ್ಪಿಕೊಂಡಿದ್ದು ಎಂದೆಲ್ಲಾ ಹೇಳಿದಳು. ಅದಕ್ಕೆ ಪ್ರತಿಯಾಗಿ ಅವನು ನಾನು ಅದನ್ನು ಅರಿತಿದ್ದೇನೆ. ನಮ್ಮ ಅಪ್ಪ ಅಮ್ಮ ಈಗ ಮನೆಯಲ್ಲಿ ಇಲ್ಲ ಬಾ ಹೋಗೋಣವೆಂದಾಗ ಆಶ್ಚರ್ಯ, ಆನಂದ ಎರಡು ಒಟ್ಟಿಗೆ ಉಂಟಾಯಿತು ಶೀಲಳಿಗೆ. ಆದರೆ ಎಲ್ಲಿಗೋದರು ಎಂಬ ಪ್ರಶ್ನೆ ಕೇಳುವ ಮುನ್ನವೇ ಅವಳ ಗಂಡ

---

1. ಆರ್ಯಾಂಬ ಪಟ್ಟಾಭಿ, ಮರಳಿ ಬಂದ ಮಮತೆ, ಪು. ೨೨

ಅವರಿಬ್ಬರು ನನ್ನ ಅಣ್ಣನ ಮನೆಗೆ ಹೋದರು ಎಂದನು. ಆದರೆ ಶೀಲಳಿಗೆ ಇದೇನು ಇಷ್ಟವಿರಲಿಲ್ಲ. ಆದರೂ ಕೆಲಸಕ್ಕೆ ಹೋಗಲು ಅವಕಾಶ ಸಿಕ್ಕಿತೆಂದು ಗಂಡನ ಜೊತೆಯಲ್ಲಿ ಹೊರಟೇ ಬಿಟ್ಟಳು.

ಇಂದಿನ ಕಾಲದಲ್ಲಿ ವಿದ್ಯಾವಂತೆಯಾದ ಯಾವುದೇ ಹೆಣ್ಣು ಮೊದಲಿನಂತೆ ಮನೆಯಲ್ಲಿರಲು ಇಚ್ಛಿಸುವುದಿಲ್ಲ. ಅವಳು ಸಹ ತಾನು ಗಂಡನಂತೆ ಆರ್ಥಿಕ ಸ್ವಾವಲಂಬಿಯಾಗಬೇಕೆಂದು ಬಯಸುತ್ತಾಳೆ. ಗಂಡ ಅದಕ್ಕೆ ನೀರೆರದರೆ ಸರಿ ಇಲ್ಲದಿದ್ದರೆ ಅವಳು ಮರದ ಬೊಂಬೆಯಂತಾಗುತ್ತಾಳೆ. ಅಷ್ಟು ಮಾತ್ರವಲ್ಲ ಗಂಡನಿಂದ ದೂರವಾಗಿಲು ಅವಳು ಹೆದರುವುದಿಲ್ಲ. ಇದು ಆಧುನಿಕ ಧೋರಣೆಯ ಕತೆಯಾಗಿದೆ.

**ತಾಯಿ** ಎಂಬ ಕತೆಯಲ್ಲಿ ಒಂದು ವಿಶಾಲವಾದ ನಿವೇಶನದ ಮದ್ಯಭಾಗದಲ್ಲಿ ತಲೆಯತ್ತಿ ನಿಂತಿದ್ದ ಭವ್ಯವಾದ ಬಂಗಲೆ ಸಮೀಪಕ್ಕೆ ಬಂದವರನೆಲ್ಲ ಕೈ ಬೀಸಿ ಕರೆಯುತ್ತಿತ್ತು. ಅದನ್ನು ನೋಡಿದವರೆಲ್ಲ ಮೆಚ್ಚಿಕೊಳ್ಳುತ್ತಿದ್ದರು. ಆ ಮನೆಯ ಒಡತಿಯ ಹೆಸರು 'ಭಗವತಿ'. ಪ್ರೀತಿಸುವ ಗಂಡ, ಸೊಸೆಯನ್ನು ಮಗಳೆಂದು ಆದರಿಸುತ್ತಿದ್ದ ಅತ್ತೆ ಮಾಮ, ಭಾರಿ ಬಂಗಲೆ, ಆಳುಕಾಳುಗಳು ಒಡವೆ ವಸ್ತುಗಳು ಯಾವುದಕ್ಕೂ ಕೊರತೆಯಿರಲಿಲ್ಲ. ಸಂಸಾರ ಹೂಡಿ ವರ್ಷಗಳಾಗಿದ್ದರೂ ಭಗವತಿ ತಾಯಿಯಾಗಿರಲಿಲ್ಲ. ಪ್ರಾರಂಭದಲ್ಲಿ ಅದನ್ನವಳು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಆದರೆ ಜನರ ಪ್ರಶ್ನೆಗಳು ಅವಳನ್ನು ಚುಚ್ಚಿ ನೋಯಿಸುತ್ತಿದ್ದವು. ಹಸಿರು ರೇಷ್ಮೆ ಸೀರೆಯುಟ್ಟು ತಲೆಗೆ ಮಲ್ಲಿಗೆ ಹೂ ಮುಡಿದು ಪುಸ್ತಕ ಓದುತ್ತಿದ್ದ ಮನೆಯೊಡತಿಯನ್ನು ಮನೆ ಕೆಲಸದ ಶಾಂತಿ ಮೆಚ್ಚುಗೆಯಿಂದ ನೋಡಿ ಮನಸ್ಸಿನಲ್ಲಂದುಕೊಂಡಳು

ಈಕೆಗೆ ಆ ಭಗವಂತ ಮಕ್ಕಳನ್ನ ಕೊಡಬಾರದೆ? ಬಡವರಿಗೆ ಸಾಕೆಂದರೂ ಮಕ್ಕಳನ್ನು ಕೊಡುತ್ತಾನೆ. ಕೊಡು ಎಂದು ಬೇಡುವವರಿಗೆ ಕೊಡದೆ ಕಾಡಿಸುತ್ತಾನೆ. ವಿವಾಹವಾದ ಕೆಲವು ವರ್ಷ ಭಗವತಿಗೆ

ಮಕ್ಕಳ ಅಗತ್ಯ ಕಂಡು ಬರಲಿಲ್ಲ. ವೈವಾಹಿಕ ಜೀವನದ ಹೊಸತನ ಮಾಸಿದಂತೆ, ಬದುಕು ಯಾಂತ್ರಿಕವಾದಂತೆ ಮಕ್ಕಳಿಗಾಗಿ ಬಯಸಿದಳು. ಆದರೆ ಪರೀಕ್ಷೆಗೆ ಒಳಪಡಿಸಿದಾಗ ದೋಷವಿದ್ದುದ್ದು ಗಂಡನಾದ ಶಶಿಧರನಲ್ಲಿ ಎಂಬುದು ದೃಢವಾಯಿತು. ಆ ಬಂಗಲೆಯಲ್ಲಿ ವಾಸವಾಗಿದ್ದವರು ಭಗವತಿ ಮತ್ತು ಅವಳ ಗಂಡ ಶಶಿಧರ. ಮಕ್ಕಳಿಲ್ಲದ ಈ ದಂಪತಿಗಳಿಗೆ ಇಷ್ಟು ದೊಡ್ಡ ಮನೆ? ಎಂದು ಕೊಳ್ಳುತ್ತಿದ್ದ ನಾಗಿಗೆ ಆಗಾಗ ಗುಡಿಸಿಲಿನಲ್ಲಿ ವಾಸ ಮಾಡುತ್ತಿದ್ದ ಬಡ ಜನರ ನೆನಪಾಗುತ್ತಿತ್ತು. ಅವಳ ಗುಡಿಸಿಲಿನಲ್ಲೆ ಎಂಟು ಜನರಿದ್ದರು. ನಾಗಿ ಎಲ್ಲಾ ಕೆಲಸ ಮುಗಿಸಿ ಮತ್ತೊಂದು ಮನೆಯ ಮೆಟ್ಟಿಲು ಹತ್ತಿದಳು. ನಾಗಿಯ ತಲೆ ಆಗಾಗ ಬಡತನ ಹಾಗೂ ಶ್ರೀಮಂತಿಕೆಯ ಬಗ್ಗೆ ಚಿಂತಿಸುತ್ತಿತ್ತು. ಬೆಳಗಿನಿಂದ ರಾತ್ರಿಯವರೆಗೂ ದುಡಿದರೂ ಕೆಲವರಿಗೆ ಬಡತನ ತಪ್ಪುತ್ತಿರಲಿಲ್ಲ. ಶ್ರೀಮಂತರು ಕುಳಿತಲ್ಲೆ ಕುಳಿತಿದ್ದರೂ ವೈಭೋಗದ ಜೀವನ ನಡೆಸುತ್ತಿದ್ದರು. ದೊಡ್ಡ ಮನೆಯಲ್ಲಿ ವಾಸ, ಒಡವೆ ವಸ್ತುಗಳು, ಮೃಷ್ಟಾನ್ನ ಭೋಜನ ಯಾಕೆ ಹೇಗೆ ಎಂದು ಕೊಳ್ಳುತ್ತಿದ್ದರೂ ಅವಳ ಪ್ರಶ್ನೆಗೆ ಉತ್ತರ ಸಿಕ್ಕುತ್ತಿರಲಿಲ್ಲ.



ಒಮ್ಮೆ ಹೆಣ್ಣು ಮಗುವೊಂದು ಶಾಂತಿಯ ತೋಳುಗಳ ಆಸರೆಯಲ್ಲಿ ಮಲಗಿದ್ದದನ್ನು ನೋಡಿದಳು. ಕಲ್ಲಿದ್ದಲಿನ ಬಣ್ಣದ ಆ ಮಗು ಮಿರಮಿರನೆ ಮಿಂಚುತ್ತಿತ್ತು. ಭಗವತಿ ಹತ್ತು ರೂಪಾಯಿಯ ನೋಟನ್ನು ಮಗುವಿನ ಕೈಲಿಟ್ಟಳು. ರಸ್ತೆಯಲ್ಲಿ ಅದು ಎಲ್ಲಾದರೂ ಬಿದ್ದು ಹೋಗಬಹುದೆಂಬ ಆತಂಕದಿಂದ ಶಾಂತಿ ನೋಟನ್ನು ತೆಗೆದುಕೊಳ್ಳಲು ಪ್ರಯತ್ನಿಸಿ ವಿಫಲಳಾದಳು. "ನೆಟ್ಟಗೆ ಕಣ್ ಬಿಡಾಕೆ ಬರಾಕಿಲ್ಲ, ಆದ್ರೂ ದುಡ್ಡಿನ ಬೆಲೆ ತಿಳಿದೈತೆ ಈ ಮಗ" ಶಾಂತಿ ನಕ್ಕಳು. ಮಗುವನ್ನು ಎತ್ತಿಕೊಂಡಿದ್ದ ಶಾಂತಿ ಕಣ್ಮರೆಯಾಗುವವರೆಗೂ ಬೀದಿ ಬಾಗಿಲಲ್ಲಿ ನಿಂತಿದ್ದ ಭಗವತಿ ಶಾಂತಿಯಾಡಿದ ಮಾತುಗಳನ್ನು ಮೆಲಕು ಹಾಕಿದಳು.

---

1. ಆರ್ಯಾಂಬ ಪಟ್ಟಾಭಿ, ಮರಳಿ ಬಂದ ಮಮತೆ, ಪು. ೬

ಭಗವತಿ ಮಗುವನ್ನು ಹೆತ್ತ ತಾಯಿಯಲ್ಲ ನಿಜ. ಆದರೆ ತಾಯಿ ಹೃದಯವೂ ನನಗಿಲ್ಲವೆ? ದೇವರು ಯಾವುದಕ್ಕೂ ಕಡಿಮೆ ಮಾಡಿಲ್ಲ, ಒಪ್ಪತ್ತಿಗಿನ ಕೂಳಿಗಾಗಿ ಇಡೀ ದಿನ ಶಾಂತಿ ದುಡಿಯುತ್ತಿದ್ದಾಳೆ. ನನಗಿರುವ ಶ್ರೀಮಂತಿಕೆಯಲ್ಲಿ ನೂರು ಮಕ್ಕಳನ್ನು ಸಾಕಬಲ್ಲೆ. ಆದರೂ ಒಂದು ಮಗುವನ್ನು ಸಾಕುವ ನಿರ್ಧಾರ ಮಾಡಲಿಲ್ಲ. ಆರು ಮಕ್ಕಳಿರುವ ಬಡ ತಾಯಿ ಶಾಂತಿ ತಬ್ಬಲಿ ಮಗುವನ್ನು ಸಾಕುತ್ತಿದ್ದಾಳೆ. ಮಕ್ಕಳೇ ಇಲ್ಲದ ನಾನೇಕೆ ಮಗುವೊಂದನ್ನು ಸಾಕುವ ಮನಸ್ಸು ಮಾಡಲಿಲ್ಲ. ಏನೇನೊ ಸಂದೇಹ ಸಂಶಯಗಳು ಅವಳನ್ನೂ ಕಾಡುತ್ತಿದ್ದವು. ಬೇರೆಯವರ ಮಗು ನಮ್ಮದಾಗುವುದೆ? ಆ ಮಗುವನ್ನು ನಮ್ಮ ಮಗುವೆಂದು ಪ್ರೀತಿಸುವುದು ಸಾಧ್ಯವೆ? ಒಂದು ಮಗು ನಾನು ಸಾಕಲಾರನೆ? ಸ್ವಂತ ತಂಗಿಯೇ ತನ್ನದೊಂದು ಮಗುವನ್ನು ಸಾಕಲು ಕೊಡುತ್ತೇನೆಂದಾಗ ಅನುಮಾನಿಸಿದ್ದೇಕೆ? ಮುಂದೆ ನಿಂತಿದ್ದ ಪ್ರಶ್ನೆಗಳನ್ನೆಲ್ಲ ದೂರಕ್ಕೆ ತಳ್ಳಿದ ಭಗವತಿ ತಂಗಿಯ ಮಗಳನ್ನು ದತ್ತು ತೆಗೆದುಕೊಳ್ಳಲು ನಿರ್ಧರಿಸಿದಳು.

ಇಲ್ಲಿ ಪ್ರೀತಿ ಮಾಡಲು, ಮುದ್ದು ಮಾಡಲು ನಮ್ಮದೇ ವಂಶದ ಕುಡಿಯಾಗಬೇಕಿಲ್ಲ. ಮಕ್ಕಳು ಯಾರಾದರೂ ಮಕ್ಕಳು ಮಕ್ಕಳೇ ಎಂಬುದನ್ನು ಕತೆ ಧ್ವನಿಸುತ್ತದೆ. ದತ್ತು ಮಕ್ಕಳ ಬಗ್ಗೆ ಒಲವಿಲ್ಲದ ಕಾಲದಲ್ಲಿ ಆರ್ಯಾಂಬ ಪಟ್ಟಾಭಿಯವರ ಚಿಂತನೆ ಆಧುನಿಕ ನಿಲುವುಳ್ಳದ್ದು, ಪ್ರಗತಿಗಾಮಿಯಾದುದು.

**ತೆರೆ ಸರಿದಾಗ** ಎಂಬ ಕತೆಯಲ್ಲಿ ನಿಲುಗನ್ನಡಿಯಲ್ಲಿ ಕಂಡ ಅಲಂಕೃತ ಸುಂದರ ಯುವತಿ ವಧು, ಅವಳು ವಿಶೇಷವಾಗಿ ಶೃಂಗರಿಸಿ ಕೊಂಡಿದ್ದಳು. ಹಚ್ಚ ಹಸಿರು ಬಣ್ಣದ ಜರತಾರಿ ಸೀರೆ, ಅದೇ ಬಣ್ಣದ ರವಿಕೆ, ಮೈತುಂಬ ಆಭರಣಗಳು, ತಲೆ ತುಂಬ ಹೂ, ಸಣ್ಣ ನಡುವಿಗೆ ಚಿನ್ನದ ಡಾಬು, ಕಿವಿಯಲ್ಲಿ ಹೊಳೆಯುವ ವಜ್ರದೋಲೆ ...... ಇನ್ನೂ ಹಲವಾರು ಒಡವೆಗಳು.

ಸ್ವಾಭಾವಿಕವಾಗಿಯೇ ಆ ಯುವತಿ ಚೆಲುವೆ, ಎತ್ತರವಾದ ನಿಲುವು, ತಿದ್ದಿಟ್ಟಂತಹ ಕಣ್ಣು, ಮೂಗು, ಬಾಯಿ, ಸಂಪಿಗೆ ಮೈಬಣ್ಣ, ನೀಳವಾದ ಕೂದಲು. ಅವಳು ತುಂಬ ಎಚ್ಚರಿಕೆಯಿಟ್ಟು

ಶೃಂಗರಿಸಿಕೊಂಡಿದ್ದಳು. ಕನ್ನಡಿಯಲ್ಲಿ ಕಂಡ ಮುಖವನ್ನು ಮೈಮರೆತು ನೋಡುತ್ತಿದ್ದಾಗ ಅಮ್ಮನ ಧ್ವನಿ ಕೇಳಿಸಿತು.[1]

"ಇನ್ನೂ ನಿನ್ನ ಅಲಂಕಾರ ಮುಗೀಲಿಲ್ವೇನು? ಗೌರಿ ಪೂಜೆಗೆ ಹೊತ್ತಾಯ್ತು."

ಮದುವೆಗಾಗಿ ಸಿದ್ಧಳಾದ ಹುಡುಗಿ ಗೌರಿಪೂಜೆ ಸಂದರ್ಭದಲ್ಲಿ ನೆನಪುಗಳ ದೋಣಿಯಲ್ಲಿ ಕುಳಿತು ಆ ಮಂಗಳ ವಾದ್ಯಗಳ ಶಬ್ದದಲ್ಲು ಅವಳ ಮನಸ್ಸು ಮದುವೆಗೆ ಮುಂಚೆ ತನ್ನ ಪ್ರಿಯಕರನ ಪರಿಚಯವಾದ ಸಂದರ್ಭ ಇವೆಲ್ಲವನ್ನು ನೆನೆಯುತ್ತದೆ. ಒಮ್ಮೆ ಮದುವೆಗೆ ಎಲ್ಲರು ಹೋಗಿದ್ದರು, ಆಗ ಅಪ್ಪನ ಸಂಬಂಧಿ ಆನಂದ ಮನೆಗೆ ಬರುತ್ತಾನೆ. ಅದಕ್ಕೂ ಮುಂಚೆ ಮನೆಯವರಿಗೆಲ್ಲಾ ಅವನು ತುಂಬಾ ಪರಿಚಯ ಇರುತ್ತಾನೆ.

ಹೀಗೆ ಮನೆಗೆ ಬರುತ್ತಿದ್ದ ಅವನು ಎಲ್ಲರೊಡನೆ ಹರಟೆ ಹೊಡೆಯುತ್ತಿದ್ದ, ಸಲಿಗೆಯಿಂದ ನಾವೆಲ್ಲ ಅವನೊಡನೆ ಮಾತನಾಡುತ್ತಿದ್ದೆವು. ಅವನ ಬಿಚ್ಚು ನುಡಿ, ನಡೆ ನನಗೆ ಇವಳಿಗೆ ತುಂಬಾ ಹಿಡಿಸಿತು. ಒಮ್ಮೆ ಭಾನುವಾರ ಮದುವೆಯಲ್ಲಿ ಒಬ್ಬಳೆ ಅಪ್ಪ ಅಮ್ಮ ಸಂಬಂಧಿಕರ ಮನೆಗೆ ಹೋಗುವುದೆಂದರೆ ನನಗೆ ಅಲರ್ಜಿ. ಯಾರೋ ಬಾಗಿಲು ತಟ್ಟಿದರು, ಕಿಟಕಿಯಿಂದಲೇ ನೋಡಿದೆ ಬಾಗಿಲು ತೆಗೆದೆ. "ಮನೆಯಲ್ಲಿ ಯಾರಿಲ್ಲ" ಗಾಬರಿ ಧ್ವನಿಯಲ್ಲಿ ಹೇಳಿದೆ.

"ನೀವಿದ್ದೀರಲ್ಲಾ..... ಒಳಗೆ ಬರಬಹುದೆ?" ನಕ್ಕ ಆನಂದ.[2]

ಅವನ ನಗುಮುಖ ನೋಡಿ "ಬನ್ನಿ ಬನ್ನಿ" ಎಂದು ಉತ್ಸಾಹದಿಂದ ಬರಮಾಡಿಕೊಂಡೆ.

ಆನಂದ ಮತ್ತು ಆ ಹುಡುಗಿ ಪರಸ್ಪರ ಮನಸ್ಸಿನಲ್ಲೆ ಪ್ರೀತಿಸುತ್ತಿದ್ದರು. .ತಂದೆ ತಾಯಿ ಅನುಮತಿ ಸಿಕ್ಕ ಮೇಲಂತು ಮದುವೆಗೆ ಸಿದ್ಧತೆ ನಡೆಯಿತು. ಒಂದು ಶುಕ್ರವಾರ ಅವರ ಮದುವೆ ದಿವಸ ಗೌರಿ

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೭
2. ತೆರೆ ಸರಿದಾಗ, ಪು. ೧೦

ಪೂಜೆ ನಡೆಯುತ್ತಿತ್ತು. ಅವಳ ಮನಸ್ಸು ಇದ್ದಕ್ಕಿದಂತೆ ನಾನಾ ರೀತಿಯ ತಳಮಳಕ್ಕೆ ಸಿಕ್ಕಿಕೊಂಡಿತು. ಇವಳ ತಂದೆಯ ತಂಗಿ ಮಗಳ ದಾಂಪತ್ಯ ಜೀವನ ಕಣ್ಮುಂದೆ ನೆನಪಾಯಿತು.

ಪ್ರತಿಭ ಮತ್ತು ಪ್ರಭಾಕರ ಎಂಬುವವರು ಪ್ರೀತಿಸಿ ಮದುವೆಯಾಗಿದ್ದರು. ಎರಡು ಮಕ್ಕಳು ಅವಳ ದಾಂಪತ್ಯ ಕಂಡು ಬಹಳ ಸುಖಿ ಎಂದು ಕೊಂಡಿದ್ದೆ. ಆದರೆ ಒಂದು ದಿನ ಅವಳ ಜೀವನದ ಬಗ್ಗೆ ನನಗೆ ಗೊತ್ತಾಯಿತು. ಪ್ರಭಾಕರ ಎಂಬುವವನು ಹೆಂಡತಿಯನ್ನು ಹೆಣ್ಣನ್ನು ಗೌರವದಿಂದ ನೋಡುತ್ತಿರಲಿಲ್ಲ. ಮದುವೆಯಾದ ಮೇಲೆ ಆ ಪ್ರೀತಿ ಬದುಕಿರಲಿಲ್ಲ. ನನ್ನದು ಪ್ರತಿಭಾಳಂತೆ ನರಕವಾದರೆ ಎಂದು ಪೂಜಿಸುತ್ತಿದ್ದ ಅವಳ ಕೈ ನಡುಗಿತು.

ಇದೇ ಸಂದಂರ್ಭದಲ್ಲಿ ಇವಳಿಗೆ ತನ್ನ ಸ್ನೇಹಿತೆಯಾದ ರತ್ನನ ನೆನಪು ಕಾಡುತ್ತದೆ. ರತ್ನ ಮತ್ತು ಇವಳು ಒಂದೇ ವಯಸ್ಸು, ರತ್ನಳಿಗೆ ಹದಿನಾರನೇ ವಯಸ್ಸಿನಲ್ಲೆ ಮದುವೆ ಮಾಡಲಾಗಿತ್ತು. ಅವಳತ್ತೆ ರಾಕ್ಷಸಿ, ಗಂಡ ತಾಯಿಯ ಗೆರೆ ದಾಟದ ನಪುಂಸಕ, ಬೇರೆ ಸಂಸಾರ ಹೂಡುತ್ತೇವೆ ಎಂದ ಕೂಡಲೆ ಅವನ ತಾಯಿ ಬೇರೆ ಹೆಣ್ಣಿನೊಡನೆ ಸಂಬಂಧ ಬೆಳೆಸುವಂತೆ ಮಾಡಿದಳು. ರತ್ನ ಆತ್ಮಹತ್ಯೆ ಮಾಡಿಕೊಂಡಳು. ಅಂಥ ಅತ್ತೆ ನನಗೂ ಸಿಕ್ಕರೆ ಭಯ ಕಥೆಯ ನಿರೂಪಕಗಳಿಗೆ.

ನಿರೂಪಕಳಿಗೆ ಮತ್ತೊಂದು ದುರಂತ ಕಣ್ಣಿಗೆ ಕಾಣಿಸಿತು. ಪದ್ಮನಿ ಸುಂದರಿ ಹೆಣ್ಣು ಇವಳು ಇನ್ಯಾರು ಅಲ್ಲ, ನಿರೂಪಳಿಗೆ ಚಿಕ್ಕಮ್ಮನ ಮಗಳು. ಮನೆಯವರೆಲ್ಲಾ ತುಂಬಾ ಒಳ್ಳೆಯವರೆ, ಆದರೆ ನಾಲ್ಕು ವರ್ಷಗಳಲ್ಲಿ ಮೂರು ಮಕ್ಕಳು ಐದನೆಯ ವರ್ಷಕ್ಕೆ ವಿಧವಾಪಟ್ಟ ಇವಳಿಗೆ ಪ್ರಾಪ್ತವಾಯಿತ್ತು.

ಹೀಗೆ ಸ್ನೇಹಿತೆಯರ ಜೀವನವನ್ನು ನೆನಪಿಸಿ ಕೊಳ್ಳುತ್ತಾ ಗೌರಿ ಪೂಜೆ ಮಾಡುತ್ತಿರುವ ಸಂದರ್ಭ ಇನ್ನೇನು ಮಂಗಳಾರತಿ ಮಾಡಬೇಕು, ಆಗ ಅಲ್ಲೆ ಇದ್ದ ಮಂಜುಳ ಸೊಗಸಾಗಿ ಹಾಡಿದಳು. ಈಕೆಯದು

ದುರಂತ ಕಥೆ. ಮಂಜುಳ ಚುರುಕು ಹುಡುಗಿ. ಸಂಗೀತ ಕಲಿಯಲು ತನ್ನ ತನು ಮನ ಧನವನ್ನೆಲ್ಲಾ ಅರ್ಪಿಸಿದ್ದಳು. ಆದರೆ ಮದುವೆಯಾದ ಮೇಲೆ ಸಂಗೀತ ಪ್ರತಿಭೆಯನ್ನು ಪ್ರೋತ್ಸಾಹಿಸದಿರಲಿ 'ನೀನು ಇನ್ನೆಂದೂ ಹಾಡಬಾರದು ಎಂದು ಅವಳಾಸೆಗೆ ಸಮಾಧಿ ತೋಡಿದರು ಅವಳ ಅತ್ತೆ ಮನೆಯವರು. ಇನ್ನು ಗಂಡನೋ ಕುಡುಕ. ಇವಳು ಯಾರೊಡನೆ ಮಾತನಾಡಿದರೂ ಸಂಶಯ ಪಡುತ್ತಿದ್ದ ಆದರೆ ಮಂಜುಳ ಆತ್ಮಹತ್ಯೆ ಮಾಡಿಕೊಳ್ಳಲಿಲ್ಲ.

ಮದುವೆಯಾದವರ ಬಾಯಿಂದ ಕೇಳಿದ ನೊಂದ ಮಾತುಗಳು ನಿರೂಪಕಿಯನ್ನು ತಲ್ಲಣ ಗೊಳಿಸಿದ್ದವು. ಭಕ್ತಿಯಿಂದ ಗೌರಿಪೂಜೆ ಮಾಡುತ್ತಿದ್ದ ಮನಸ್ಸು ಆತಂಕದಿಂದ ಒಲೆಯ ಮೇಲಿನ ನೀರಿನಂತೆ ಕೊತ ಕೊತ ಕೊತ ಕುದಿಯುತ್ತಿತ್ತು. ನನ್ನ ಬದುಕು ಪ್ರತಿಭೆ, ರತ್ನ ಪದ್ಮಿನಿ ಮಂಜುಳ ವಿಜಯಳಂತಾದರೆ ಎಂದು ಒಳ ಜೀವ ಮಿಡಿಯುತ್ತಲಿತ್ತು. ಆದರೂ ಆನಂದನ ನಗು ಮುಖ ಕಂಡು ನನ್ನನ್ನು ಆಕ್ರಮಿಸಿದ್ದ ಕತ್ತಲಿನ ಮುಸುಕು, ಭಯದ ಬಲೆ, ಅಜ್ಞಾನದ ತೆರೆ ಸರಿದು ಜ್ಞಾನದ ಬೆಳಕು ಹರಡಿತು. ಹಲವಾರು ನೋವಿನ ದಾಂಪತ್ಯ ಬದುಕಿನ ಹಿನ್ನೆಲೆಯಲ್ಲಿ ನಮ್ಮ ಭವಿಷ್ಯವನ್ನು ಅರ್ಥೈಸಿ ಹೆದುರುವುದು ತಪ್ಪೆಂದು ತೀರ್ಮಾನಕ್ಕೆ ಬರುತ್ತಾಳೆ.

ಒಟ್ಟಾರೆ ಈ ಕಥೆ ನಿರೂಪಿಸುದೇನೆಂದರೆ ಬೇರೆಯವರಂತೆ ನಮ್ಮ ಬದುಕು ನೋವಿನಿಂದ ಕೂಡಿದರೆ ಅಥವಾ ನಮ್ಮ ಜೀವನ ಅವರಂತಾದರೆ ಎಂದೆಲ್ಲಾ ಅವರ ಬದುಕಿನೊಡನೆ ನಮ್ಮ ಜೀವನವನ್ನು ಹೋಲಿಸಿಕೊಂಡು ಮುಂದಿನ ಸುಖಕರ ಬಾಳನ್ನು ಹಾಳುಮಾಡಿಕೊಳ್ಳಬಾರದು ಎಂದು ಸಾರುತ್ತದೆ.

**ಪರಿವರ್ತನೆ :** ಕಾಫಿ ತಂದು ಕೊಟ್ಟ ಹುಡುಗಿಯನ್ನು ನೋಡಿದ ಶಿವಮೂರ್ತಿ ಗೆಳೆಯನನ್ನು ವಿಸ್ಮಯದಿಂದ ಪ್ರಶ್ನಿಸಿದ "ನಿನ್ನ ಮಗಳು ಕಲ್ಯಾಣಿ ಅಲ್ವೇನೋ ಸುಬ್ಬು?" "ಹೌದು, ಯಾಕೆ

ಗುರ್ತು ಸಿಕ್ಕಲಿಲ್ವಾ?" "ಏಣಿ ಹಾಗೆ ಬೆಳೆದಿದ್ದಾಳೆ... ಅದಕ್ಕೇ ಥಟ್ಟನೆ ಗೊತ್ತಾಗಲಿಲ್ಲ. ಏನು ಓದ್ತಿದ್ದಾಳೆ."[1]

ಹೀಗೆ ಮಾತನಾಡುತ್ತ ಮಗಳಿಗೆ ಒಂದು ಒಳ್ಳೆಯ ವರ ಇದ್ದರೆ ಹೇಳು ಸುಬ್ಬು ಎಂದಾಗ ಇವರಿಬ್ಬರಿಗೂ ಸ್ನೇಹಿತನಾದ ಶ್ರೀಪತಿಯ ಮಗನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡು ಎನ್ನುತ್ತಾನೆ ಆದರೆ, ಶ್ರೀಪತಿ ತುಂಬಾ ಶ್ರೀಮಂತ. ಅವನೆಲ್ಲಿ ನಾನೆಲ್ಲಿ ಎಂಬ ಪ್ರಶ್ನೆ ಶಿವಮೂರ್ತಿಯದು.

ಶಿವಮೂರ್ತಿಯ ಹೆಂಡತಿ ಬಡವನ ಕೈ ಹಿಡಿದು ಬದುಕಿನುದ್ದಕ್ಕು ಬವಣೆ ಪಟ್ಟಿದ್ದ ಕಾಮಾಕ್ಷಿಗೆ ಮಗಳಾದರೂ ಶ್ರೀಮಂತರ ಮನೆ ಸೇರಿ ನೆಮ್ಮದಿಯಿಂದ ಜೀವನ ಸಾಗಿಸಲಿ ಎಂದು ಆಸೆ. ಸುಬ್ಬಣ್ಣನ ಮನೆಯಲ್ಲಿ ಒಂದು ಸಂಜೆ ವಧು ಪರೀಕ್ಷೆ ನಡೆಯಿತು. ಮಿಂಚಿನ ಬಳ್ಳಿಯಂತಿದ್ದ ಚೆಲುವೆ ಕಲ್ಯಾಣಿಯನ್ನು ನೋಡಿದ ಗೋಪಾಲ ಬೆರಗಾದ. ಯಾಕೆಂದರೆ ಅವಳು ನೂರು ಜನರಲ್ಲಿ ಎದ್ದು ಕಾಣಿಸುವಂತ ಚೆಲುವೆ. ಸರಿ ಕಲ್ಯಾಣಿ ಗೋಪಾಲನಿಗೆ ಮೆಚ್ಚುಗೆಯಾದಳು.

ಗೋಪಾಲ-ಕಲ್ಯಾಣಿಗೆ ಮದುವೆಯಾಯಿತು. ಮೂರು ವರ್ಷ ಮೂರು ತಿಂಗಳಂತೆ ಕಳೆಯಿತು. ಅತ್ತೆ ಮಾವ ಮೊಮ್ಮಗುವಿನ ನಿರೀಕ್ಷೆಯಲ್ಲಿದ್ದರು. ಸಂತಾನವಾಗಲಿಲ್ಲದ ಇಬ್ಬರನ್ನು ವೈದ್ಯ ಪರೀಕ್ಷೆಗೆ ಗುರಿಪಡಿಸಿದರು. ಕಲ್ಯಾಣಿಯಲ್ಲಿ ದೋಷವಿತ್ತು.

ಗೋಪಾಲನಿಗೆ ಮತ್ತೊಂದು ವಿವಾಹ ಮಾಡುವ ಹಂಬಲವಿತ್ತು ತಂದೆ ತಾಯಿಯರದು. ಆದರೆ ಗೋಪಾಲ ಒಪ್ಪಲಿಲ್ಲ. ಆನಂತರ ಅನಾಥಾಶ್ರಮದಿಂದ ಮಗು ತರುವುದೆಂದು ಒಂದು ತೀರ್ಮಾನಕ್ಕೆ ಬಂದರು. ಆದರೆ ಅತ್ತೆ ಮಾವ ಒಪ್ಪಲಿಲ್ಲ. ಮೊಮ್ಮಗು ಆಗಲಿಲ್ಲವಲ್ಲ ಎಂದು ಕೊರಗಿ ಕಲ್ಯಾಣಿ

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೧೬

ಅತ್ತೆ ಸತ್ತಳು. ಆರು ತಿಂಗಳ ನಂತರ ಶ್ರೀಪತಿ ಸತ್ತನು. ಮನೆಯಲ್ಲಿ ತುಂಬಾ ಬೇಸರ. ಅಕ್ಕಪಕ್ಕದವರೆಲ್ಲ ಮಕ್ಕಳಿಲ್ಲವೇ ಎಂದು ಪ್ರಶ್ನಿಸುತ್ತಿದ್ದರು. ಗೋಪಾಲ ಹೊರಗೆ ಹೆಚ್ಚು ಕಾಲ ಕಳೆಯುತ್ತಿದ್ದ. ಆದರೆ ಯಾವಾಗಲು ಮನೆಯಲ್ಲಿದ್ದ ಕಲ್ಯಾಣಿಗೆ ಬೇಸರವಾಗುತ್ತಿತ್ತು. ಒಮ್ಮೆ ಊರಿಗೆ ಹೋದಾಗ ತನ್ನ ತಂಗಿ ಗೌರಿಯನ್ನು ಮನೆಗೆ ಕರೆತಂದಿದ್ದಳು

ಒಮ್ಮೆ ಮೂರು ಜನ ಸೇರಿ ಮೃಗಾಲಯಕ್ಕೆ ಭೇಟಿ ಕೊಟ್ಟರು. ಸುತ್ತಾಟದಿಂದ ಕಲ್ಯಾಣಿ ಬಳಲಿದಳು. ಕಲ್ಯಾಣಿ ತಂಗಿ ಗೌರಿ ಮತ್ತು ಅವಳ ಗಂಡ ಇಬ್ಬರು ಸುತ್ತಾಡಿ ಬಂದರು. ಹಲವಾರು ಮೈಲಿಗಳ ಸುತ್ತಾಟದಿಂದ ಎಲ್ಲರಿಗೂ ಆಯಾಸವಾಗಿತ್ತು. ಆದರೆ ಗೌರಿ ಅಡಿಗೆ ಮಾಡಿ ಎಲ್ಲರಿಗೂ ಬಡಿಸಿದಳು. ಊಟ ತುಂಬಾ ಚೆನ್ನಾಗಿತ್ತು ಎಂದು ಗೋಪಾಲ ನಾದಿನಿಯನ್ನು ಹೊಗಳಿದನು. ಯುಗಾದಿ ಹಬ್ಬಕ್ಕಾಗಿ ಪ್ರತಿವರ್ಷ ಗೋಪಾಲ ಹೆಂಡತಿಗೆ ರೇಷ್ಮೆ ಸೀರೆ ತಂದುಕೊಡುತ್ತಿದ್ದವನು ಆ ವರ್ಷ ಗೌರಿಗೂ ಸೀರೆಯನ್ನು ಉಡುಗೊರೆಯಾಗಿ ಕೊಟ್ಟಾಗ ಗಂಡನ ಧಾರಾಳ ಬುದ್ಧಿಯನ್ನು ಕಲ್ಯಾಣಿ ಮೆಚ್ಚಿಕೊಂಡಳು. ಸ್ವಲ್ಪದಿನದಲ್ಲೆ ಗೌರಿ ಅಪ್ಪ ಸುಬ್ಬು ಗೌರಿಯನ್ನು ಊರಿಗೆ ಕರೆದುಕೊಂಡು ಹೋಗೋಣಾಂತ ಬರುತ್ತಾರೆ. ಆದರೆ ತಂಗಿಯನ್ನು ಇನ್ನೂ ಸ್ವಲ್ಪದಿನ ಇರಿಸಿಕೊಳ್ಳಬೇಕೆಂಬಾಸೆ ಕಲ್ಯಾಣಿಯದು.

ಸುಬ್ಬಣ್ಣನವರು ಗೌರಿಗೊಬ್ಬ ವರನನ್ನು ಹುಡುಕಿ ಆಕೆಯ ವಿವಾಹ ಮಾಡಬೇಕೆಂದು ಯೋಚಿಸಿ ಅವಳನ್ನೂ ಕರೆದೊಯ್ಯಲು ಬಂದಿದ್ದರು. ಆದರೆ ಅಳಿಯನಾದ ಗೋಪಾಲ ನಿಮ್ಮ ಮಗಳಿಗೆ ನಾವೇ ವರನನ್ನು ನೋಡುತ್ತೇವೆಂದಾಗ ನೀವು ಅಳಿಯ ಅಲ್ಲ ನಮ್ಮ ಮಗ ಎಂದು ನುಡಿದ ಮಾವ ಸುಬ್ಬಣ್ಣ. ಆದರೂ ತಾಯಿಯಿಲ್ಲದ ಇವಳಿಗೆ ಮದುವೆ ಮಾಡೋದು ತಂದೆಯಾದ ನನ್ನ ಕರ್ತವ್ಯ ಎಂದು ಕರೆದುಕೊಂಡು ಹೋದರು. ಆದರೆ ಗೌರಿ ಹೋದ ಮೇಲೆ ಅವಳ ನೆನಪು

ಗೋಪಾಲನಿಗೆ ಕಾಡುತ್ತಿರುತ್ತದೆ. ಏನಾದರೂ ಮಾಡಿ ನಾನೆ ಅವಳನ್ನು ಮದುವೆಯಾದರೆ ಹೇಗೆ? ತಂಗಿಯನ್ನೆ ಮದುವೆಯಾದರೆ ಕಲ್ಯಾಣಿ ಬೇಡವೆನ್ನುವುದಿಲ್ಲ ಎಂದೆಲ್ಲಾ ಯೋಚಿಸುತ್ತಾ ಗೌರಿ ನನ್ನನ್ನು ಒಪ್ಪುತ್ತಾಳೆಯೇ, ಒಪ್ಪದೇ ಏನು ಅವಳೇನು ಕಲ್ಯಾಣಿಯಂತೆ ಸುಂದರಿಯೇ? ನನ್ನಂಥ ಶ್ರೀಮಂತ ಗಂಡು ಅವಳಿಗೆಲ್ಲಿ ಸಿಕ್ಕಬೇಕು ಹೀಗೆಲ್ಲಾ ಯೋಚಿಸಿ ಮಾವನಿಗೆ ಒಂದು ಪತ್ರ ಬರೆಯುತ್ತಾನೆ. ಮಾವನು ಪತ್ರವನ್ನು ಓದಿ ಮಗಳಾದ ಕಲ್ಯಾಣಿಗೆ ಪತ್ರ ಬರೆದು ಈ ಮದುವೆಗೆ ನೀನು ಒಪ್ಪಿದ್ದೀಯ ಎಂದು ತಂದೆ ಪತ್ರ ಓದಿದ ಕಲ್ಯಾಣಿಗೆ ಅಘಾತವಾಗುತ್ತದೆ. ನಿನ್ನನ್ನು ನನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತೇನೆ ನಮಗೆ ಮಕ್ಕಳಿಲ್ಲದಿದ್ದರೇನಂತೆ ನನಗೆ ನೀನು ಮಗು, ನಿನಗೆ ನಾನು ಮಗು, ಖಂಡಿತ ಮರು ಮದುವೆಯಾಗುವುದಿಲ್ಲ ಆ ಚಿಂತೆ ನಿನಗೆ ಬೇಡ" ಎನ್ನುತ್ತಿದ್ದ ಗಂಡ ನನಗೊಂದು ಮಾತೂ ತಿಳಿಸದೆ ಗೌರಿಯನ್ನು ಮದುವೆಯಾಗುವ ನಿರ್ಧಾರ ಕೈಗೊಂಡಿದ್ದಾನೆಯೆ? ಎಂದೆಲ್ಲ ಚಿಂತಿಸುತ್ತಾಳೆ. ಆಮೇಲೆ ಕಲ್ಯಾಣಿ ತನ್ನೊಪ್ಪಿಗೆ ಸೂಚಿಸಿ ತಂದೆಗೆ ಕಾಗದ ಬರೆಯುತ್ತಾಳೆ. ರಾತ್ರಿ ಗಂಡ ಮನೆಗೆ ಬಂದಾಗ ಅವನು "ಈ ಮದುವೆಗೆ ನೀನು ಒಪ್ತಿಯಾಂತ ನನಗೆ ಗೊತ್ತಿತ್ತು. ಅದಕ್ಕೆ ನಿನಗೇನೂ ಹೇಳದೆ ನಿನ್ನ ತಂದೆಗೆ ಕಾಗದ ಬರೆದೆ" ಎಂದನು.[1]

"ಗೌರಿ ಈ ಮನೆಗೆ ಬಂದ ಮೇಲೆ ನನ್ನನ್ನು ನೀವು ಮರೆಯಬೇಡಿ ಕಲ್ಯಾಣಿಯ ಧ್ವನಿ ಗದ್ಗದವಾಯಿತು. "ನಿನ್ನನ್ನು ಮರೆಯೋದೆ? ಈ ಮನೆಯಲ್ಲಿ ನಿನಗೆ ಅಗ್ರಸ್ಥಾನ ಎಂದು ಗೋಪಾಲ ಹೆಂಡತಿಯನ್ನು ಸಂತೈಸುತ್ತಾನೆ.

ಈ ವಿಷಯವನ್ನು ತಂದೆ ಸುಬ್ಬಣ್ಣ ಗೌರಿಗೆ ಹೇಳಿದನು. "ಅಕ್ಕ ಭಾವ ಇಬ್ಬರೂ ಈ ಮದುವೆಗೆ ಒಪ್ಪಿದ್ದರೂ ನಾನು ಭಾವನನ್ನು ಮದುವೆಯಾಗಲಾರೆ." ಅದಕ್ಕೆ ಪ್ರತಿಯಾಗಿ ಸುಬ್ಬಣ್ಣ ಭವಿಷ್ಯ

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೨೫

ದೃಷ್ಟಿಯಿಂದ ಈ ಮದುವೆಗೆ ಒಪ್ಪು" ಎಂದಾಗ, ಆದರೆ ಅದಕ್ಕೆ ಒಪ್ಪದ ಅವಳು ತನ್ನ ನಿರ್ಧಾರವನ್ನು ಭಾವನಿಗೆ ಪತ್ರ ಮುಖೇನ ಹೀಗೆಂದು ತಿಳಿಸುತ್ತಾಳೆ.

"ನಾನೇ ನಿಮಗೆ ಕಾಗದ ಬರೆಯುವ ಸ್ವಾತಂತ್ರ್ಯ, ಸಲಿಗೆ ತೆಗೆದುಕೊಂಡಿದ್ದೇನೆ. ದಯವಿಟ್ಟು ಕ್ಷಮಿಸಿ, ನೀವು ನಮ್ಮಕ್ಕನ ಕೈ ಹಿಡಿದವರು. ನನಗೆ ಅಣ್ಣನ ಸಮಾನ. ಪ್ರೀತಿಯ ಅಕ್ಕನಿಗೆ ಸವತಿಯಾಗಲಾರೆ. ಅವಳ ಸ್ಥಾನ ಕಿತ್ತುಕೊಂಡು ಅನ್ಯಾಯ ಮಾಡಲಾರೆ. ಅಕ್ಕನ ನೋವನ್ನು ನೀವೆಂದಾದರೂ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದೀರಾ? ಅಕ್ಕ ತುಂಬಾ ಜಾಣೆ, ಚೆಲುವೆ, ವಿದ್ಯಾವಂತೆ, ವಿಚಾರವಂತೆ, ಎಲ್ಲಕ್ಕಿಂತ ಮುಗಿಲಾಗಿ ನಿಮ್ಮನ್ನು ತುಂಬಾ ಪ್ರೀತಿಸುತ್ತಾಳೆ. ಒಂದು ದೋಷವೆಂದರೆ ಬಂಜೆತನ, ನಿಮ್ಮಲ್ಲೇ ಆ ದೋಷವಿದ್ದರೆ ಅಕ್ಕ ಮತ್ತೊಂದು ಮದುವೆಯಾಗುತ್ತಿದ್ದಳೆ? ಖಂಡಿತ ಇಲ್ಲ. ನಾನು ನಿಮ್ಮನ್ನು ಮದುವೆಯಾಗಲಾರೆ, ನಮ್ಮ ದೇಶದಲ್ಲಿ ಅನಾಥ ಮಕ್ಕಳಿಗೇನು ಕೊರತೆ ಇಲ್ಲ. ಇಂತಿ ನಿಮ್ಮ ಪ್ರೀತಿಯ ತಂಗಿ ಗೌರಿ."

ನಿಮಗೆ ಅವಳು ಬರೆದಿರುವ ಪ್ರೇಮಪತ್ರ ನಾನು ಓದಬಹುದೆ ಎಂದು ಕಲ್ಯಾಣಿ ಕೇಳಿದಾಗ "ಅದು ಪ್ರೇಮ ಪತ್ರವಲ್ಲ, ಅಣ್ಣನಿಗೆ ಬುದ್ಧಿವಾದ ಹೇಳಿ ಬರೆದಿರುವ ತಂಗಿಯ ಪತ್ರ" ಎಂದುತ್ತರಿಸಿದ ಗೋಪಾಲ.

"ಗೌರಿ ವಯಸ್ಸಿನಲ್ಲಿ ನನಗಿಂತ ತುಂಬ ಚಿಕ್ಕವಳು. ಆದರೂ ನನಗಿಂತ ಜಾಣೆ. ಹೆಣ್ಣಿಗೂ ಗಂಡಿನಂತೆ ಮನಸ್ಸಿದೆ, ಆಸೆ ಆಕಾಂಕ್ಷೆಗಳಿವೆ. ತನ್ನದೆ ಆದ ವ್ಯಕ್ತಿತ್ವವಿದೆ ಎನ್ನುವುದು ನನಗೆ ತಿಳಿದದ್ದು ಗೌರಿ ಪತ್ರ ಓದಿದ ಮೇಲೆ ಎಂದು ಗೋಪಾಲ ತನ್ನ ಹೆಂಡತಿ ಕಲ್ಯಾಣಿಗೆ ಹೇಳುತ್ತಾನೆ. ಗಂಡನ ನಿರ್ಧಾರ ಕಲ್ಯಾಣಿಯ ಮನಸ್ಸನ್ನು ಅರಳಿಸಿತು. ಆತನ ಪರಿವರ್ತನೆಗೆ ಕಾರಣಳಾದ ತಂಗಿ ಗೌರಿಯನ್ನು ಮೌನವಾಗಿ ಮನಃಪೂರ್ವವಾಗಿ ಮನಸ್ಸಿನಲ್ಲೇ ವಂದಿಸಿದಳು.

ಯಾವುದೇ ಹೆಣ್ಣು ತನದೇ ಯಾವುದೇ ಸಮಸ್ಯೆ ಇದ್ದರೂ ತಾನೇ ಅದನ್ನು ಗಂಡನೊಡನೆ ಹಂಚಿಕೊಳ್ಳಲು ಇಷ್ಟಪಡುತ್ತಾಳೆ ಹೊರತು ತನ್ನ ಪತಿಯನಲ್ಲ. ಏಕೆಂದರೆ ತನ್ನ ಬದುಕಿಗೆ ಗಂಡನೇ ಸರ್ವಸ್ವವಾಗಿರುತ್ತಾನೆ. ಅಷ್ಟು ಮಾತ್ರ ಇಂತಹ ನಿಷಯದಲ್ಲಿ ಹೆಣ್ಣು ಮಹಾನ್ ಸ್ವಾರ್ಥಿಯಾಗಿ ಬಿಡುತ್ತಾಳೆ. ಇದು ನೈತಿಕ ದೃಷ್ಟಿಯಿಂದಲು ಸಮಾಜಕ್ಕೂ ಒಳ್ಳೆಯದೆಂದೇ ನನ್ನ ಭಾವನೆ. ಏಕೆಂದರೆ ಬದುಕಿನಲ್ಲಿ ಕೊನೆಯ ತನಕ ತನ್ನ ಜೊತೆಯಲ್ಲಿ ಪರಸ್ಪರ ಗಂಡ ಹೆಂಡತಿಗೆ ಹೆಂಡತಿ ಗಂಡನಿಗೆ ಆಸರೆಯಾಗಿರಬೇಕು. ಎಂಬುದೇ ಕತೆಯ ಉದ್ದೇಶ. ಕೌಟಂಬಿಕ ನೆಮ್ಮದಿ ಹಾಳಾಗುವ ಸಂದರ್ಭದಲ್ಲಿ ತೋರಬೇಕಾದ ಸಹನೆ, ಆದರ್ಶ ಗುಣವನ್ನು ನೆನಪಿಸುವ ಜೊತೆಗೆ ಒಂದು ಗಂಡಿನ ಮನಃ ಪರಿವರ್ತನೆಗೆ ಹೆಣ್ಣು ಹೇಗೆ ಕಾರಣೀಭೂತಳಾಗುತ್ತಾಳೆ ಎಂಬುದನ್ನು ಈ ಕತೆ ಕಟ್ಟಿ ಕೊಡುತ್ತದೆ.

'ಪ್ರಜ್ಞೆ' ಎಂಬ ಕತೆಯಲ್ಲಿ ನಿರೂಪಕನು ಮತ್ತು ಕಾವೇರಿ ಪ್ರೇಮಿಸಿ ಮದುವೆಯಾಗಿರುತ್ತಾರೆ. ಆರು ವರ್ಷ ಹಿಂದೆ ಬ್ಯಾಂಕಿನಲ್ಲಿ ಅವಳಿಗೂ ಕೆಲಸವಾಗಿ ನಮ್ಮಿಬ್ಬರ ಪರಿಚಯ ಪ್ರೇಮಾಂಕುರಕ್ಕೆ ನಾಂದಿಯಾಯಿತು ಎಂದು ನಿರೂಪಕರು ಹೇಳುತ್ತಾರೆ. ಮದುವೆಗೆ ಕಾವೇರಿ ಮನೆಯಲ್ಲಿ ಪ್ರತಿಭಟಿಸಿದರೂ ದೇವಸ್ಥಾನದಲ್ಲಿ ಸರಳ ವಿವಾಹ ಮಾಡಿಕೊಳ್ಳುತ್ತಾರೆ. ಕಾವೇರಿ ಒಳ್ಳೆಯ ಪತ್ನಿ, ಗೆಳತಿ ಮತ್ತು ಎಲ್ಲರೂ ಮೆಚ್ಚುವಂತಹ ಸಂಗಾತಿ ಎನ್ನುವುದು ತಿಳಿದು ನಿರೂಪಕರ ಮನಸ್ಸು ತೃಪ್ತಿಹೊಂದಿತ್ತು. ಅನೇಕ ಸ್ನೇಹಿತರನ್ನು ಬರಮಾಡಿದರೂ ಅಡಿಗೆ ಮಾಡಿ ಉಣಬಡಿಸುತ್ತಿದ್ದಳು.

ಮೂರು ವರ್ಷದ ನಂತರ ಒಬ್ಬ ಮಗ ಹುಟ್ಟುತ್ತಾನೆ. ಅವನ ಹೆಸರು ಚೇತನ. ಅವನ ವರ್ಷದ ಹುಟ್ಟು ಹಬ್ಬ ವೈಭವದಿಂದ ಆಚರಿಸುತ್ತಾರೆ. ಒಂದು ದಿನ ಕಾವೇರಿ ಜ್ವರ ಬರುತ್ತೆ ಟೈಫಾಯಿಡ್ ಕಾಯಿಲೆಯಾಗಿ ಆರು ತಿಂಗಳು ನರಳುತ್ತಾಳೆ. ಹೀಗಾಗಿ ಬ್ಯಾಂಕಿನ ಕೆಲಸಕ್ಕೆ ರಾಜೀನಾಮೆ ನೀಡುತ್ತಾಳೆ. ಒಂಟಿಯಾಗಿ ಮನೆಯಲ್ಲಿರಲು ಬೇಸರವಾಗಿ ಗಂಡನನ್ನು ಬೇಗ ಮನೆಗೆ ಬರುವಂತೆ

ಪೀಡಿಸುತ್ತಿರುತ್ತಾಳೆ. ಅವಳಿಗಾಗಿ ಅವನು ಹಂಬಲಿಸುವುದಕ್ಕಿಂತ ಮಿಗಿಲಾಗಿ ಅವಳು ಅವನನ್ನು ತುಂಬಾ ಪ್ರೀತಿಸುತ್ತಿರುತ್ತಾಳೆ.

ಚೇತನಿಗೆ ನಾಲ್ಕು ವರ್ಷ ನಡೆಯುತ್ತಿದ್ದಾಗ ಮತ್ತೊಂದು ಮಗುವಿಗಾಗಿ ಹಂಬಲಿಸಿ ಕಾವೇರಿಯಲ್ಲಿ ನಿವೇದಿಸುತ್ತಾನೆ. ಚೇತನನಿಗೆ ಒಬ್ಬ ತಂಗಿ ಬೇಕು ಎಂದು ಕಾವೇರಿ ಸಮ್ಮತಿಸುತ್ತಾಳೆ. ಅದಾದ ಸ್ವಲ್ಪ ದಿನದಲ್ಲೆ ಕಾವೇರಿ ತುಂಬಾ ಬಡವಾಗುತ್ತಾಳೆ. ಅವಳ ನಡೆ ನುಡಿಯಲ್ಲಿ ಬದಲಾವಣೆಯಾಗಿ ಒಂಟಿಯಾಗಿ ಮಲಗುತ್ತಿರುತ್ತಾಳೆ. ನಾನೇಕೆ ಅವಳಿಗೆ ಬೇಡವಾಗಿದ್ದೇನೆ? ಅವಳ ವರ್ತನೆ ನಿರೂಪಕನನ್ನು ನಲುಗಿಸುತ್ತದೆ. "ಕಾವೇರಿ ನೀನು ನನ್ನ ಹೆಂಡತಿ. ನಿನ್ನನ್ನು ಮದುವೆಯಾದದ್ದು ನಿನ್ನ ಪಾಟಿಗೆ ಬಿಡುವುದಕ್ಕಲ್ಲ" ಎಂದಾಗ ಅವಳು "ನಿಮ್ಮ ಹೆಂಡತಿ ಎಂದ ಮಾತ್ರಕ್ಕೆ ನನ್ನನ್ನು ಬಲತ್ಕಾರ ಮಾಡುತ್ತೀರೇನು? ಎಂದು ಕಾವೇರಿ ಸಿಟ್ಟಾಗಿ ನುಡಿಯುತ್ತಾಳೆ.[1] ಹೀಗೆ ಕಾಲ ಕಳೆಯಲು ಸ್ವಲ್ಪ ದಿನದಲ್ಲಿ ಕಾವೇರಿ "ನನ್ನಿಂದ ನಿಮಗೆ ಅನ್ಯಾಯವಾಗುತ್ತಿದೆ ಎನ್ನುವುದು ನನಗೆ ಗೊತ್ತು, ಆದರೆ ನಾನು ಅಸಹಾಯಕಳು, ವಿಷ ತಂದು ಕೊಟ್ಟರೆ ಕುಡಿದು ಸಾಯ್ತೀನಿ. ಈ ನರಕದಿಂದ ಪಾರಾಗ್ತಿನಿ" ಎನ್ನುತ್ತಾಳೆ. "ಏನೆಂದೆ? ಈ ಮನೆ ನಿನಗೆ ನರಕವೇ ನಿನಗೆ, ಏನಾಗಿದೆ ಎಂದು ಕಾವೇರಿಯ ಗಂಡ ಅಬ್ಬರಿಸುತ್ತಾನೆ. ಸ್ವಲ್ಪ ದಿನಗಳ ನಂತರ ಕಾವೇರಿ ಮನೆಗೆ ಬಂದಾಗ ಎಂಟು ಘಂಟೆಯಾಗಿರುತ್ತದೆ. ಅವಳಿಗೆ ಅವಳ ಮೇಲೆ ಅನುಮಾನ ಉಂಟಾಗುತ್ತದೆ. ಒಬ್ಬ ಪ್ರೇಮಿಯಿರಬೇಕು, ಅದಕ್ಕೆ ನನ್ನ ಬಗ್ಗೆ ಈ ಅಲಕ್ಷ ಭಾವ, ಯಾರವನು? ಎಂಬ ಸಂದೇಹ ಕಾವೇರಿ ಗಂಡನಿಗೆ ಅನ್ನಿಸುತ್ತದೆ.

ಹಾಗಾಗಿ ಬ್ಯಾಂಕಿನಿಂದ ಆಗಾಗ್ಗೆ ಕಾವೇರಿಗೆ ಪೋನ್ ಮಾಡುತ್ತಾ ಅವಳು ಮನೆಯಲ್ಲಿದ್ದಾಳೋ ಇಲ್ಲವೋ ಎಂದು ಪರೀಕ್ಷಿಸುತ್ತಿರುತ್ತಾನೆ. ಅವಳು ಸುಳ್ಳು ಮಾತುಗಳಿಂದ ಇವನಿಗೆ ಸಂಶಯ ಇನ್ನೂ ಬಲವಾಗುತ್ತದೆ. ಒಂದು ದಿನ ಅವಳು ತಂಗಿಯ ಮದುವೆಗೆಂದು ಹೊರಟಾಗ ನಿನಗೊಬ್ಬ ಪ್ರೇಮಿ

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೩೧

ಸಿಕ್ಕಿದ್ದಾನೆ ಎನ್ನುವುದು ನನಗೆ ತಿಳಿದಿದೆ. ನಾವು ಡೈವೋರ್ಸ್ ಮಾಡೋಣ ಎನ್ನುತ್ತಾನೆ. ದಯವಿಟ್ಟು ಕ್ಷಮಿಸಿ, ಡೈವೋರ್ಸ್ ಮಾಡಿ. ಆದರೆ ನನ್ನ ತಂಗಿಯ ಮದುವೆ ಮುಗಿಯಲಿ. ನೀವು ಮದುವೆಗೆ ಬನ್ನಿ ಎಂದಳು ಕಾವೇರಿ ಕೋರಿಕೊಳ್ಳುತ್ತಾಳೆ.

ಅಂದು ಕಾವೇರಿಯ ತಂಗಿಯ ಮದುವೆ ಮನಸ್ಸಿಲ್ಲದ ಮನಸ್ಸಿನಿಂದ ಸಂಜೆ ಆರತಕ್ಷತೆಗೆ ನಿರೂಪಕ ಹೋಗುತ್ತಾನೆ. ಆದರೆ ಅವನ ಕಣ್ಣುಗಳು ಮಾತ್ರ ಕಾವೇರಿಯನ್ನು ಹುಡುಕಿರುತ್ತವೆ. ಒಬ್ಬ ಸುಂದರ ತರುಣನೊಡನೆ ಮಾತನಾಡುತ್ತಿರುವುದನ್ನು ಕಾಣುತ್ತಾನೆ. ಆತ ಇವನಿಗೆ ಪರಿಚಯವಿದ್ದವನೇ ಆಗಿದ್ದು ಡಾಕ್ಟರ್ ಸೀತಾರಾಮ್. ಇನ್ನೂ ಅವಿವಾಹಿತ ತರುಣ. ಅವನೇ ಕಾವೇರಿಯ ಪ್ರೇಮಿಯೇನು? ಎನ್ನುವುದು ಅಸೂಯೆಯ ಜ್ವಾಲೆ ಭುಗಿಲೇಳುತ್ತದೆ. ಸ್ವಲ್ಪ ಹೊತ್ತಿನಲ್ಲಿ ಸೀತಾರಾಮ್ ಕಾವೇರಿ ಅಲ್ಲಿಗೆ ಬರುತ್ತಾರೆ. ಸೀತಾರಾಮ್ ನಿರೂಪಕನ ಮಾತನಾಡಬೇಕೆಂದು ಬಂದನೆ. ಕಾವೇರಿ ತುಂಬ ಕಷ್ಟದಲ್ಲಿದ್ದಾಳೆ. ಅವಳ ಕಷ್ಟವೇನೆಂದು ಅರ್ಥ ಮಾಡಿಕೊಳ್ಳದೆ ನೀವು ಅವಳ ನಡತೆಯ ಬಗ್ಗೆ ನೀವು ಸಂಶಯ ಪಡುತ್ತಿದ್ದೀರಿ. 'ಪಾಪ... ಕಾವೇರಿ' ಸೀತಾರಾಮ್ ಸಂತಾಪದ ಲೊಚಗುಟ್ಟುತ್ತಾನೆ.

"ಕಾವೇರಿ.... ಕಾವೇರಿಗೆ ಕ್ಯಾನ್ಸರ್...." ಸೀತಾರಾಮನು ಪಿಸುಗುಟ್ಟಿದಾಗ "ಸುಳ್ಳು" ನಾನೆಲ್ಲಿದ್ದೇನೆ ಎನ್ನುವುದನ್ನೂ ಮರೆತು ನಿರೂಪಕ ಕಿರುಚುತ್ತಾನೆ. ಸುಳ್ಳಾಗಿದ್ರೇ ಚೆನ್ನಾಗಿತ್ತು.[1]

ಹಳೆಯ ಸಿನಿಮಾದಂತೆ ಕಥಾಹಂದರ ಕಂಡುಬಂದರೂ ಕತೆಗಾರ್ತಿಯು ಒಂದು ಕುಟುಂಬದ ಹೆಣ್ಣು ತನಗೆ ಸಂಕಟ ದುಃಖ ಬಂದರೂ ಅದನ್ನು ತೋರಗೊಡದೆ ಗಂಡನ ಒಳಿತಿಗಾಗಿ ಮಿಡಿಯುವುದನ್ನು ಈ ಕತೆಯ ಕಾವೇರಿ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಆದರೆ ನಾನು ಹೇಳ್ತಾ ಇರೋದು ಸತ್ಯ. ನಾನು ಡಾಕ್ಟರು. "ನನ್ನ ಕಾವೇರಿಗೆ ಕ್ಯಾನ್ಸರ್! ಈ ವಿಷಯ ನನಗ್ಯಾಕೆ ಮೊದಲೇ ಹೇಳಲಿಲ್ಲ. "ನಾನು

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೩೭

ಆಕ್ಷೇಪಿಸಿದೆ. ಕಾವೇರಿ ಹೆಚ್ಚು ದಿನ ಬದುಕುವ ಭರವಸೆಯಿಲ್ಲ. ಬದುಕಿರುವ ಕೆಲವು ದಿನಗಳನ್ನಾದರೂ ಅವಳನ್ನು ಸಂತೋಷವಾಗಿಡಿ. ನನ್ನ ಕಣ್ಣುಗಳಲ್ಲಿ ನೀರಾಡುತ್ತಿರುವುದನ್ನು ಗಮನಿಸಿದ ಸೀತಾರಾಮ್ ನನ್ನ ಹೆಗಲ ಮೇಲೆ ಕೈಯಿಟ್ಟು ಸಂತೈಸಿದ. ನಾನು ಕಾವೇರಿಯನ್ನು ಅನುಮಾನಿಸಿದೆ. ಅವಳ ನಿಜಸ್ಥಿತಿ ತಿಳಿಯದೆ ಏನೆಲ್ಲ ಕಲ್ಪಿಸಿಕೊಂಡಿದ್ದೆ. ಅವಳ ಕೈಹಿಡಿದು ಕ್ಷಮೆ ಯಾಚಿಸಿದೆ. ಮನೆಗೆ ಕರತಂದು ಇವತ್ತಿನಿಂದ ಬೇರೆ ರೂಮಿನಲ್ಲೆ ನೀನು ಮಲಗೊಂದು ಬೇಡ ಕಾವೇರಿ. ಹೆದರ ಬೇಡ. ನಾನೇನು ರಾಕ್ಷಸನಲ್ಲ. ಮನುಷ್ಯನೆ. ಈ ಕಥೆಯಲ್ಲಿ ಹೆಣ್ಣಿನ ಸೂಕ್ಷ್ಮ ಮನಸ್ಸು ಅವಳು ತನ್ನ ಗಂಡನೊಡನೆ ತನ್ನ ಕಾಯಿಲೆ ವಿಷಯ ಹೇಳಿಕೊಳ್ಳದೆ ತೊಂದರೆಗೀಡಾದ ಸ್ಥಿತಿ ಮತ್ತು ಅವನ ಸಂಶಯಕ್ಕೆ ಕಾರಣಳಾಗುವುದು ಇವೆಲ್ಲವನ್ನು ಕಾಣಬಹುದು.

**ಒಪ್ಪಂದ** ಎಂಬ ಕತೆಯಲ್ಲಿ ಇಬ್ಬರು ವಧು-ವರರಿಗೆ ಮದುವೆ ಒಪ್ಪಂದ ಏರ್ಪಡುತ್ತದೆ. ಅವರಿಬ್ಬರ ನಡುವೆ ಒಂದು ಒಪ್ಪಂದ ಏರ್ಪಡುತ್ತದೆ. ಮದುವೆಯಾದ ಮೇಲೆ ಕೆಲಸಕ್ಕೆ ಹೋಗಲು ಅವನು ಒಪ್ಪಿರುತ್ತಾನೆ. ಆದರೆ ದುರಾದುಷ್ಟವಶಾತ್ ಅವನು ತನ್ನ ತಂದೆ-ತಾಯಿಗೆ ಈ ವಿಷಯ ತಿಳಿಸಿರುವುದಿಲ್ಲ. ಅವಳು ಕೆಲಸಕ್ಕೆ ಹೋಗುವುದು ಅತ್ತೆ-ಮಾವನಿಗೆ ಇಷ್ಟವಿರುವುದಿಲ್ಲ. ಆದರೆ ಅವಳು ಮಾತ್ರ ಮನೆ ಕೆಲಸ ಮಾಡುವುದರಲ್ಲಿ ಸ್ವಲ್ಪವೂ ಲೋಪವಿಲ್ಲದಂತೆ ಬಹಳ ನಾಜೂಕಿನಿಂದ ಮಾಡುತ್ತಿರುತ್ತಾಳೆ. ಆದರೂ ಏಕೋ ಅತ್ತೆ-ಮಾವರಿಗೆ ಇದು ಹಿಡಿಸುವುದಿಲ್ಲ. ಇದರಿಂದ ನೊಂದ ಆಕೆ ತನ್ನ ತವರು ಮನೆಗೆ ಹೋಗುತ್ತಾಳೆ. ದಿನ ಉರುಳಿದಂತೆ ಆಕೆಯ ಗಂಡನಿಗೆ ನಿಜವಾದ ಅರಿವಾಗುತ್ತದೆ. ಅವನು ಅವಳನ್ನು ಕರತರಲು ಅವಳ ತವರು ಮನೆಗೆ ಬರುತ್ತಾಳೆ. ಆದರೆ ಆಕೆ ಬರಲು ಒಪ್ಪದಿರಲು ಆಗ ಅವಳಿಗೆ ನಿಜ ಸ್ಥಿತಿ ಹೇಳುತ್ತಾನೆ. ನನ್ನ ಅಪ್ಪ ಅಮ್ಮ ಅಣ್ಣನ ಮನೆಗೆ ಹೋಗುತ್ತಾರಂತೆ ಬಾ ಎಂದಾಗ, ಆಕೆ ಆದರೆ ಇದೆಲ್ಲ ಹೇಗೆ, ಏಕೆ, ಏನು ಎಂದೆಲ್ಲಾ ಪ್ರಶ್ನಿಸಿದಾಗ ಒಂದು ಬೇಕು ಎಂದರೆ ಇನ್ನೊಂದು ಕಳೆದುಕೊಳ್ಳಬೇಕು ಎಂದು ಹೆಂಡತಿಗೆ ಉತ್ತರಿಸುತ್ತಾನೆ.

ಅಂದರೆ ಹೆಣ್ಣು ಹೊರಗೆ ಕೆಲಸ ಮಾಡುವುದನ್ನು ಒಪ್ಪದ ಹಳೆಯ ತಲೆಮಾರು ಜನ, ಯಾರನ್ನು ಕಳೆದುಕೊಳ್ಳಲು ಸಿದ್ಧನಾಗದ ಗಂಡ ಇವೆಲ್ಲ ಈ ಕಥೆಯಲ್ಲಿ ಅತ್ಯಂತ ಸೂಕ್ಷ್ಮವಾಗಿ ನಿರೂಪಿತವಾಗಿರುವ ಅಂಶ.

ಒಂದು ಕುಟುಂಬ ನೆಮ್ಮದಿ, ಶಾಂತಿ ಇರಬೇಕೆಂದರೆ ಶಾಂತಿ, ನೆಮ್ಮದಿ ಸಹವರ್ತಿಗಳ ಸಹಕಾರ, ಸಹಾಯ ಮುಖ್ಯ. ಮನೆಯ ಎಲ್ಲರೂ ಮಾತನ್ನಾಡುತ್ತಾ ಜಗಳ ಆಡುತ್ತಾ ಕುಳಿತರೆ ಕೌಟುಂಬಿಕ ಸ್ವಾಸ್ಥ್ಯ ಹಾಳಾಗುತ್ತದೆ. ಅದಕ್ಕಾಗಿ ವ್ಯಕ್ತಿಯೋರ್ವ ತಾಯಿತಂದೆಯವರ ಒಡನಾಟವನ್ನೇ ದೂರ ಮಾಡಿಕೊಳ್ಳುವ ಪ್ರಸಂಗವನ್ನು ಈ ಕತೆಯಲ್ಲಿ ಗುರುತಿಸಬಹುದು.

**ಸುಂದರಿ** ಎಂಬ ಕತೆಯಲ್ಲಿ ಹೆಸರಿಗೆ ತಕ್ಕ ಹಾಗೆ ಸುಂದರಿಯಾಗಿರುತ್ತಾಳೆ. ಆದರೆ ಅವಳಿಗೆ ಹಣ ಮಾಡಿ ಬಹಳ ಶ್ರೀಮಂತಳಾಗುವಾಸೆ. ಒಂದು ಜ್ಯುವೆಲೆರಿಯಲ್ಲಿ ಕೆಲಸಕ್ಕೆ ಸೇರುತ್ತಾಳೆ. ಸ್ವಲ್ಪ ದಿನಗಳಲ್ಲಿ ಜ್ಯುವೆಲೆರಿಯ ಯಜಮಾನನ ಮಗನ ಜೊತೆ ಪ್ರೇಮಾಂಕುರವಾಗುತ್ತದೆ. ಆದರೆ ಅವನಿಗೆ ಮೊದಲೆ ಮದುವೆಯಾಗಿರುತ್ತೆ, ಆದರೆ ಇವರ ಸೌಂದರ್ಯಕ್ಕೆ ಮರುಳಾಗಿರುತ್ತಾನೆ. ಸರಿ ಇಬ್ಬರು ಜೊತೆಯಲ್ಲಿ ತಿರುಗಾಡುತ್ತಿರುತ್ತಾರೆ. ಈ ವಿಷಯ ಹೇಗೊ? ಅವನ ಹೆಂಡತಿಗೆ ತಿಳಿದು, ಅವಳ ಮೇಲೆ ಆಸಿಡ್ ಹಾಕಿಸುತ್ತಾಳೆ. ಅನಂತರ ಹುಷಾರಾದ ಕೆಲವೇ ದಿನಗಳಲ್ಲಿ ಮತ್ತೆ ಜ್ಯುವಲರಿಗೆ ಕೆಲಸ ಕೇಳಲು ಹೋದಾಗ ಅವನು ಕೆಲಸಕ್ಕೆ ಸೇರಿಸಿಕೊಳ್ಳಲಾರದೆ ತಿರಸ್ಕರಿಸುತ್ತಾನೆ. ಅಷ್ಟೇ ಅಲ್ಲದೆ ಎಲ್ಲೂ ಕೆಲಸ ಸಿಗುವುದಿಲ್ಲ. ಅವಳ ವಿಕಾರ ರೂಪವನ್ನು ಕಂಡು ಎಲ್ಲರೂ ಹೆದರುತ್ತಾರೆ. ಒಬ್ಬ ಮಾತ್ರ ಇವಳನ್ನು ಮದುವಯಾಗಲು ಒಪ್ಪುತ್ತಾನೆ, ಅವನು ಕುರುಡನಾಗಿರುತ್ತಾನೆ.

ಒಟ್ಟಾರೆ ಆಸಿಡ್‌ನಿಂದ ಅವಳ ಮುಖ ವಿಕಾರವಾದರೂ ಸಹೃದಯಿಯಾದ ಒಬ್ಬ ಕುರುಡ ಇವಳನ್ನು ಲಗ್ನವಾದುದು ಅವನ ಹೃದಯ ಶ್ರೀಮಂತಿಕೆಯನ್ನು ತೋರಿಸುತ್ತದೆ. ಒಂದು ಹೆಣ್ಣಿಗೆ

ಗಂಡನ ಆಸರೆಬೇಕು, ಅವನಿಗೂ ಅಷ್ಟೆ, ಹೆಣ್ಣಿನ ಪ್ರೀತಿ ಬೇಕೆಬೇಕು ಎಂಬುದು ಕತೆಯ ಆಶಯವಾಗಿದೆ.

**ಪರಿವರ್ತನೆ :** ಮಗಳು ಕಾಲೇಜು ಉಪನ್ಯಾಸಕಿಯಾಗಿರುತ್ತಾಳೆ. ಅದೇ ಕಾಲೇಜಿನ ಒಬ್ಬ ವಿದುರ ಉಪನ್ಯಾಸಕನೊಡನೆ ಪ್ರೇಮಾಂಕುರವಾಗುತ್ತದೆ. ಮನೆಯ ವಿರೋಧದ ನಡುವೆಯು ಇಬ್ಬರು ವಿವಾಹವಾಗುತ್ತಾರೆ. ಕೆಲವೇ ದಿನಗಳಲ್ಲಿ ಆತ ಸ್ಕೂಟರ್ ಆಕ್ಸಿಡೆಂಟ್ ಸತ್ತು ಹೋಗುತ್ತಾನೆ. ಆಗಲು ಮನೆಯವರು ಯಾರು ಬಂದು ನೋಡಲಿಲ್ಲ. ಅವಳ ದುರದೃಷ್ಟವೋ ಏನೋ ಕೆಲವೇ ದಿನಗಳಲ್ಲಿ ಆಕೆಯ ತಾಯಿಗೂ ಆಕ್ಸಿಡೆಂಟ್‌ನಲ್ಲಿ ಕಾಲು ಮುರಿದು ಹೋಗುತ್ತದೆ. ತಂದೆ ಮಗಳಿಗೆ ಪೋನ್ ಮಾಡುತ್ತಾನೆ. ನಿಮ್ಮಮ್ಮನ ಕಾಲು ಮುರಿದು ಹೋಗಿದೆ. ಅಷ್ಟೇ ಅಲ್ಲ ಪ್ರತಿದಿನ ಕಾಲೇಜಿಗೆ ಪೋನ್ ಮಾಡುತ್ತಾ ಇರುತ್ತಾನೆ. ಆದರೆ ಆಕೆ ನನಗೆ ಯಾರು ಇಲ್ಲ, ಯಾವುದಾದರೂ ಪೋನ್ ಬಂದರೆ ನೀವು ಹೇಳುವ ಹೆಸರಿನವರು ಇಲ್ಲಿ ಯಾರು ಇಲ್ಲ ಅಂತ ಹೇಳಿ ಎಂದು ಜವಾನನಿಗೆ ತಿಳಿಸಿರುತ್ತಾಳೆ.

ನಿರೂಪಕಿ ಹೇಳುವುದಿಷ್ಟು ನನಗೆ ಕಷ್ಟ ಬಂದಾಗ ಅವರಾರು ಬರಲಿಲ್ಲ ಅವರಿಗೆ ಕಷ್ಟ ಬಂದಾಗ ನಾನು ಅವರಿಗೆ ಬೇಕಾದನೇ ಎಂದು. ಅಂದರೆ ಇವಳಿಗೆ ಹಣ ಬರುತ್ತದೆಂದು ಅವರು ಇವಳ ಮೇಲೆ ಕರುಣೆ ತೋರಿಸಲು ಪ್ರಯತ್ನಿಸಿದರೆ, ಅವನ್ನು ನಂಬುವಷ್ಟು ಮುಗ್ಧತನವನ್ನು ಆಕೆ ಹೊಂದಿರುವುದಿಲ್ಲ. ಅನುಭವ ಅವಳಿಗೆ ಪಾಠ ಕಲಿಸಿರುತ್ತದೆಯಾದ್ದರಿಂದ ನಿರೂಪಕಿ ವಾಸ್ತವಕ್ಕೆ ಹೆಚ್ಚು ಬೆಲೆ ಕೊಡುತ್ತಾಳೆ.

* * *

# ಅಧ್ಯಾಯ - ೫

## ಆರ್ಯಾಂಬ ಪಟ್ಟಾಭಿ ಅವರ ಕಥಾಸಂಕಲನಗಳಲ್ಲಿ ಕೌಟುಂಬಿಕ ಮತ್ತು ಮಾನವೀಯ ಸಂಬಂಧಗಳ ಒಟ್ಟು ವಿವೇಚನೆ



# ಅಧ್ಯಾಯ - ೫

# ಆರ್ಯಾಂಬ ಪಟ್ಟಾಭ ಅವರ ಕಥಾಸಂಕಲನಗಳಲ್ಲಿ ಕೌಟುಂಬಿಕ ಮತ್ತು ಮಾನವೀಯ ಸಂಬಂಧಗಳ ಒಟ್ಟು ವಿವೇಚನೆ

ಒಟ್ಟಾರೆ ಆರ್ಯಾಂಬ ಪಟ್ಟಾಭಿಯವರ ಕತೆಗಳಲ್ಲಿ ಹಿರಿಯರ ಬಗ್ಗೆ ಗೌರವ, ಕಾಳಜಿ, ಕಿರಿಯರ ಆಸೆಗೂ ಬೆಲೆ, ಅಂತರ್ಜಾತಿ, ಸರಳ ವಿವಾಹ, ವಿಧವಾ ಸಮಸ್ಯೆ, ಅನಾಥರ ಬಗ್ಗೆ ಅನುಕಂಪವನ್ನು ಗುರುತಿಸಬಹುದಾಗಿದೆ.

**ಅಭಿಲಾಷೆ** ಕತೆಯಲ್ಲಿ ಸೀತಾ ಎಂಬ ಕನ್ಯಾ ಮೂವತ್ತು ದಾಟಿದರೂ ಮದುವೆಯಾಗಿರಲಿಲ್ಲ. ವಿದ್ಯಾವಂತೆ, ವಿಚಾರವಂತೆ, ಆದರೂ ಅವಳಿಗೇ ಮದುವೆಯಾಗಲು ಮನಸ್ಸಿರಲಿಲ್ಲ. ವಿದ್ಯಾಭ್ಯಾಸ ಮುಗಿದ ನಂತರ ನೌಕರಿ ಸೇರಿದ ಮೇಲೆ ಸ್ವಾವಲಂಬಿಯಾಗಿ ಆರ್ಥಿಕ ಸ್ವಾತಂತ್ರ್ಯ ಗಳಿಸುತ್ತಾಳೆ ಎಂಬುವುದೂ ಅವಳಿಗೆ ಸ್ಪಷ್ಟವಾಯಿತು. ಇವಳ ಅಕ್ಕ ಮದುವೆಯಾಗಿ ಅತ್ತೆ ಮನೆಯಲ್ಲಿ ನಾನಾ ರೀತಿಯ ಹಿಂಸೆಗೆ ಸಿಕ್ಕಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ಹೀಗಾಗಿ ಮದುವೆಯಿಲ್ಲದೆ ಸುಖ ಜೀವನ ಪಡೆಯಲು ಸಾಧ್ಯ ಎನ್ನುವುದನ್ನೂ ಸಮಾಜಕ್ಕೆ ತೋರಿಸಬೇಕೆಂದು ಅವಳು ನಿಶ್ಚಯಿಸಿದಳು.

ಸೀತಾ ವರ್ಗವಾದ ಮೇಲೆ ಬೆಂಗಳೂರಿಗೆ ಬಂದು ಒಂಟಿ ಜೀವನ ಪ್ರಾರಂಭಿಸಿದ್ದಾಳೆ. ಆದರೆ ನಂಜಿ ಎಂಬುವವಳನ್ನು ಮನೆ ಕೆಲಸಕ್ಕೆ ನಿಯೋಜಿಸಿಕೊಂಡಿದ್ದಳು. ನಂಜಿಗೇನಾದರೂ ಆರೋಗ್ಯ ತಪ್ಪಿದ್ದರೆ ಅವಳ ಮಗಳು ಕಮಲ ಬಂದು ಕೆಲಸ ಮಾಡಿಕೊಡುತ್ತಿದ್ದಳು. ನಂಜಿ ಬೆಳೆದದ್ದು ಬಡತನದಲ್ಲಿ, ಅವಳಪ್ಪ ಹಡದ ಹತ್ತು ಮಕ್ಕಳಲ್ಲಿ ಅವಳೇ ಚೊಚ್ಚಲು. ಪ್ರತಿವರ್ಷ ಅವ್ವ ಬಸುರಿ, ಇಲ್ಲವೇ ಬಾಣಂತಿ,

ಹೀಗಾಗಿ ತಂಗಿ ತಮ್ಮಂದಿರಿಗೆಲ್ಲ ಅವಳೇ ಸಾಕುತಾಯಿ. ತುಂಬಿದ ಮನೆಯಲ್ಲಿ ದುಡಿದು ಬಳಲಿದ್ದ ನಂಜಿಗೆ ಗಂಡನ ಮನೆಯಲ್ಲಿ ಗಂಡ, ಅತ್ತೆ ಇಬ್ಬರ ಯೋಗಕ್ಷೇಮ ನೋಡಿಕೊಂಡೆ ಸಾಕಾಗಿತ್ತು. ಇವಳ ಗಂಡ ಕುಡಿಯುವುದೆಲ್ಲ ಆಕೆ ಸಂಪಾದಿಸಿದ ಹಣದಿಂದಲೇ. ಲಗ್ನವಾದ ಹತ್ತು ವರ್ಷಗಳಾದ ಮೇಲೆ ಕಮಲ ಹುಟ್ಟಿದಳು.

ಒಂದು ರಾತ್ರಿ ತಾಯಿ ಮಗಳು ಇಬ್ಬರೂ ಬಂದು ಸೀತಳ ಮನೆಯ ಬಾಗಿಲು ತಟ್ಟಿದರು. "ಕುಡಿದು ನಮ್ಮನ್ನು ಭೈರ ದನ ಚಚ್ಚಿದ್ಹಂಗೆ ಚಚ್ತಾನೆ. ಅವನ ಕೂಡ ಬಾಳೋದು ಕಸ್ಟ ಕಣ್ರವ್ವ" ಎಂದು ಅತ್ತಳು.[1] ಗಂಡನಿಗೆ ಬುದ್ಧಿ ಹೇಳು ಎಂದೆಲ್ಲಾ ಸೀತಾ ಹೇಳಿದ ಮಾತುಗಳು ಫಲಕಾರಿಯಾಗಲಿಲ್ಲ. "ನನ್ನ ಬಿಟ್ರೂ ಎಂಡ ಬಿಡಾಕಿಲ್ಲ ಅಂತಾನೆ ಆ ಮೂದೇವಿ. ಅವ್ವಾ, ಒಂದು ಮಾತು ನಿಮ್ಮನ್ನ ಕೇಳ್ಲಾ" "ಕೇಳು ನಂಜಿ." "ಯೆಣ್ಣಾಗಿ ಹುಟೋದು ತಪ್ಪಾ? ಯೆಣ್ಣು ಎರಡು ತುತ್ತು ಅನ್ನಕ್ಕಾಗಿ ಈಟೆಲ್ಲ ಕಸ್ಟ ಅನುಭವಿಸ್ಬೇಕಾ? ಇದೇ ಬದುಕಾ? ನನ್ನ ಪ್ರಶ್ನೆಗೆ ಉತ್ತರ ಹೇಳ್ರವ್ವಾ. ನೀವು ಓದ್ದವ್ರು.... ತಿಳಿದವ್ರು...."[2]

ಆ ಕೆಲಸದಾಕೆ ಹೇಳಿದ ಮಾತುಗಳನ್ನು ಕೇಳಿದ ವಿದ್ಯಾವಂತೆಯಾದ ಸೀತಾ ಮಹಿಳೆಯರು ವಿಧವಿಧವಾದ ಕಷ್ಟನಷ್ಟಗಳಿಗೆ ಸಿಕ್ಕಿ ನರಳುವುದನ್ನು ಕಣ್ಣಾರೆ ಕಂಡಿದ್ದಳು. ಅಷ್ಟು ಮಾತ್ರವಲ್ಲ ಹೆಣ್ಣು ಓದಿರಬೇಕು ಎಂಬುದು ಸೀತಾಳ ಅಭಿಲಾಷೆ. ಅದಕ್ಕಾಗಿಯೇ ನಿನ್ನ ಹಾಗೆ ಕಮಲಿನೂ ಮನೇಲಿ ಕೂರಿಸ್ಕೋಬೇಡ. ಚೆನ್ನಾಗಿ ಓದಿಸು, ಪುಸ್ತಕಗಳನ್ನು ಓದೋದ್ರಿಂದ ಪ್ರಪಂಚ ಅರ್ಥವಾಗುತ್ತೆ, ಇಲ್ಲದಿದ್ರೆ ಗಂಡಸರ ಕೈಲಿ ತುಳಿಸ್ಕೊಂಡೇ ಸಾಯಬೇಕಾಗುತ್ತೆ" ಎಂದೆಲ್ಲಾ ತಿಳಿವಳಿಕೆ ಹೇಳುತ್ತಾಳೆ. ಒಟ್ಟಾರೆ ಇಲ್ಲಿ ಲೇಖಕಿಯರಾದ ಆರ್ಯಾಂಬ ಅವರ ಅಭಿಪ್ರಾಯ ಏನೆಂದರೆ "ಹೆಣ್ಣೊಂದು ಕಲಿತರೆ

---

1. ತೆರೆ ಸರಿದಾಗ, ಪು. ೪೦
2. ತೆರೆ ಸರಿದಾಗ, ಪು. ೪೨

ಶಾಲೆಯೊಂದು ತೆರೆದಂತೆ" ಹಾಗೂ ಹೆಣ್ಣು ಕಲಿತರೆ ಗಂಡಿನ ದರ್ಪದಿಂದ, ದಬ್ಬಾಳಿಕೆಯಿಂದ ಪಾರಾಗಬಹುದು, ಲೋಕಜ್ಞಾನ ಸಿಗುತ್ತದೆ. ಹೆಣ್ಣನ್ನು ಸಮಾಜ ಎಷ್ಟೊಂದು ತುಂಬಾ ನಿಕೃಷ್ಟವಾಗಿ ಕಾಣುತ್ತಿದೆ. ಇವೆಲ್ಲದರಿಂದ ಅವಳು ತಪ್ಪಿಸಿಕೊಳ್ಳಬೇಕಾದರೆ ಜ್ಞಾನವಂತೆ ಆಗಬೇಕು, ವಿದ್ಯಾವಂತೆ ಹಾಗೂ ಬುದ್ಧಿವಂತೆ ಆಗಬೇಕು ಎಂಬುದು ನನ್ನ ಅಭಿಲಾಷೆ.

**ಆ ಪುಸ್ತಕ** ಎಂಬ ಕತೆಯಲ್ಲಿ ಕಾವೇರಿ, ಕೃಪ ಸಮವಯಸ್ಸಿನ ಗೆಳತಿಯರು. ಇಬ್ಬರೂ ಮದುವೆಯಾಗಿ ಎರಡು ಮಕ್ಕಳ ತಾಯಂದಿರು. ಆಗಾಗ ಪರಸ್ಪರ ಭೇಟಿಯಾಗಿ ಸಿನಿಮಾ, ಸಮಾಜ, ಷಾಪಿಂಗ್ ನೆಪದಲ್ಲಿ ಸುತ್ತಾಡುತ್ತಾ ಯಾಂತ್ರಿಕ ಬದುಕಿನ ಬಂಧನದಿಂದ ಬಿಡುಗಡೆ ಹೊಂದುವ ಪ್ರಯತ್ನ ಮಾಡುತ್ತಿದ್ದರು. ಗೆಳತಿಯರು ಸಮವರ್ಣದ ಲಕ್ಷಣವಾಗಿದ್ದ ಯುವತಿಯರು. ಆದರೆ ಎತ್ತರವಾಗಿದ್ದ ಕೃಪ ಕೃಶಾಂಗಿಯಾಗಿದ್ದರೆ ಕಾವೇರಿಯದು ಸ್ಥೂಲದೇಹ. ಇಬ್ಬರ ಪರಸ್ಪರ ಸಂಭಾಷಣೆ ನಡೆಸುತ್ತಿದ್ದ ಸಂದರ್ಭದಲ್ಲಿ ಕಾವೇರಿ ನಿನ್ನೆ ಲೈಬ್ರರಿಗೆ ಹೋಗಿದ್ದಾಗ ಒಂದು ಪುಸ್ತಕ ತಂದು ಓದಿದೆ ತುಂಬಾ ಚೆನ್ನಾಗಿದೆ. ತಂದು ಕೊಡ್ತೀನಿ. ಹೆಸರೇನು ಗೊತ್ತಾ? ತೆಳ್ಳಗಾಗೋದು ಹೇಗೆ? ತಂದು ಕೊಡ್ತೀನಿ 'ಆ ಪುಸ್ತಕ'ದಲ್ಲಿರುವ ಹಾಗೆ ನಡೆದುಕೊಂಡ್ರೆ ಖಂಡಿತಾ ನೀನೂ ನನ್ನ ಹಾಗೆ ತೆಳ್ಳಗಾಗ್ತೀಯ. "ಹೌದಾ? ಆ ಪುಸ್ತಕ ತಂದುಕೊಡು. ನಿನ್ನ ಹಾಗೆ ತೆಳ್ಳಗಾಗೋದಾದ್ರೆ ಏನ್ಬೇಕಾದ್ರೂ ಮಾಡ್ತೀನಿ."[1]

ಕಾವೇರಿ ಪುಸ್ತಕವನ್ನು ಓದುತ್ತಾ ಕುಳಿತಿರುವುದು ಆಕೆಯ ಗಂಡನಿಗೆ ಆಶ್ಚರ್ಯ ಎನಿಸಿತು. ಏಕೆಂದರೆ ಒಂದು ಪತ್ರಿಕೆಯನ್ನು ಓದದ ಅವಳ ಈ ಬದಲಾದ ವರ್ತನೆ ಕಂಡು 'ಆ ಪುಸ್ತಕದ ಬಗ್ಗೆ ಕಾವೇರಿ ಗಂಡನಿಗೆ ಕುತೂಹಲ ಹೆಚ್ಚಿತು. ಆ ಪುಸ್ತಕದಲ್ಲಿ ಏನು ಬರೆದಿದೆ? ತೆಳ್ಳಗಾಗುವುದು ಹೇಗೆ ಎಂದು ಬರೆದಿದೆ ಎಂಬುದನ್ನೆಲ್ಲಾ ಆಕೆ ಗಂಡನಿಗೆ ವಿವರಿಸುತ್ತಾಳೆ. ಆ ಪುಸ್ತಕದಲ್ಲಿ ತೆಳ್ಳಗಾಗುವುದರ ಬಗ್ಗೆ ಕೆಲವು ಸಲಹೆ ಸೂಚನೆಗಳನ್ನು ನೀಡಿದೆ ಎಂದು ತನ್ನ ಗಂಡನಿಗೆ ಹೇಳಿದಳು. ಆಗ ಅವರಿಬ್ಬರ

---

1. ಮರಳಿ ಬಂದ ಮಮತೆ, ಆರ್ಯಾಂಬ ಪಟ್ಟಾಭಿ, ಪು. ೨೮

ನಡುವೆ ದಪ್ಪ, ಸಣ್ಣ ಎಂಬ ವಿಚಾರವಾಗಿ ದೊಡ್ಡ ಸಂಭಾಷಣೆಯೆ ನಡೆಯುತ್ತೆ. ನಾನು ದಪ್ಪ ಅಂತ ನೀವು ಹಾಸ್ಯ ಮಾಡ್ತೀರ ಅಲ್ವೆ. ನೋಡ್ತಿರಿ ಈ ಪುಸ್ತಕದಂತೆ ನಡಕ್ಕೊಂಡ್ರೆ ನಾನು ನಾಲ್ಕು ತಿಂಗಳಲ್ಲೆ ತೆಳ್ಳಗಾಗ್ತೀನಿ. ಸರಿ ಮಾರನೆಯ ದಿನದಿಂದಲೇ ಕಾವೇರಿ ಪುಸ್ತಕದಂತೆ ನಡೆದುಕೊಂಡಳು. ಗಂಡ ಮಕ್ಕಳಿಗೆ ಭಕ್ಷ್ಯಮೃಷ್ಟಾನ್ನ ಭೋಜನ, ತಾನು ಮಾತ್ರ 'ಆ ಪುಸ್ತಕ'ದಂತೆ ನಡೆದುಕೊಳ್ಳುವುದನ್ನು ಚಾಚುತಪ್ಪದೆ ಮಾಡುತ್ತಿದ್ದಳು.

ಒಂದು ದಿನ ಬೆಳಗ್ಗೆ ಕಾವೇರಿ ವ್ಯಾಯಾಮ ಮಾಡುತ್ತಿದ್ದಾಗ ತಲೆಸುತ್ತಿ ಕೆಳಗೆ ಬಿದ್ದಳು. ಗುಡುಗೆ? ಸಿಡಿಲೆ, ಭೂಕಂಪವಾಯಿತೆ? ಮನೆ ಕುಸಿಯಿತೆ? ಏನಾಯಿತೆಂದು ಪಾಂಡುರಂಗ ಬೆಚ್ಚಿದ. ಅವಳತ್ತ ಧಾವಿಸಿದ. ನೆಲದ ಮೇಲೆ ಕಪ್ಪೆಯಂತೆ ಮಗುಚಿ ಬಿದ್ದಿದ್ದ ಕಾವೇರಿ ಮೇಲೇಳಲಾರದೆ ಸಂಕಟಪಡುತ್ತಿದ್ದಳು. ಬಲಗಾಲಿನ ಮೂಳೆ ಮುರಿದಿತ್ತು. ಅದಕ್ಕೆ ಚಿಕಿತ್ಸೆಯೂ ಆಯಿತು. ಕೆಲವು ದಿನಗಳ ನಂತರ ನನ್ನ ಪುಸ್ತಕ ಎಲ್ಲೂ ಕಾಣ್ತಿಲ್ಲ, ನೀವೇನಾದರೂ ನೋಡಿದ್ರಾ? ಕಾವೇರಿ ಪ್ರಶ್ನೆಗೆ ಗಂಡ ಪಾಂಡುರಂಗ 'ಹುಂ ಅದನ್ನು ಬಿಸಾಡಿದೆ.' ಕಾವೇರಿ "ಅದು ನನ್ನದಲ್ಲ ಲೈಬ್ರರಿಯಿಂದ ಕೃಪ ತಂದು ಕೊಟ್ಟಿದ್ಲು. ಅವಳಿಗೆ ಕೊಡ್ಬೇಕಾಗಿತ್ತು." ಅದಕ್ಕೆ ಅವನು "ನನಗೂ ಗೊತ್ತು ಅದಕ್ಕೆ ಕೃಪ ಮನೆ ಬಾಗಿಲಲ್ಲಿ ಬಿಸಾಡಿ ಬಂದೆ ಎಂದ. ನೀನು ಆ ಪುಸ್ತಕ ಓದೋದು ಬೇಡ. ನೀನು ಗುಂಡು ಗುಂಡಕ್ಕೆ ಮೈಕೈ ತುಂಬಿಕೊಂಡಿದ್ರೇ ನಂಗಿಷ್ಟ, ಕಾವೇರೂ" ಎಂದು ಪ್ರೀತಿಯಿಂದ ಪಾಂಡುರಂಗ. "ಹಾಗೆ ಅಂತೀರಾ?" ಎಂದ ಕಾವೇರಿ ನವವಧುವಿನಂತೆ ನಾಚಿ ನೀರಾದಳು.

"ಆ ಪುಸ್ತಕ"ದಲ್ಲಿ ಲೇಖಕಿ ಆರ್ಯಾಂಬರವರು ತೆಳ್ಳಗಾಗುವುದರ ಬಗ್ಗೆ ಹಾಗೂ ದಪ್ಪಗಿರುವ ಪಾಡು ಏನೆಂಬುದನ್ನೆಲ್ಲಾ ಇಡಿ ಇಡಿಯಾಗಿ ಮನ ಮುಟ್ಟುವಂತೆ ವಿವರಿಸುವುದು ಅತ್ಯಂತ ಸೊಗಸಾಗಿದೆ. ಏಕೆಂದರೆ ದಪ್ಪಗಿರುವವರು ಪ್ರಸ್ತುತ ದಿನಗಳಲ್ಲಿ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ತೆಳ್ಳಗಾಗಲು ಬಯಸುತ್ತಿದ್ದಾರೆ ಎಂಬುದನ್ನು ಅಂದೇ ಲೇಖಕಿ ಊಹಿಸಿರಬಹುದೇನೋ ಎಂದೆನಿಸುತ್ತದೆ.

**ಸಾಂತ್ವನ :** "ಅರಣ್ಯ ಜೀವನ ಸಾಪ್ತಾಹಿಕ ಸಮಾರಂಭ" ನಡೆಯಿತು. ಒಂದು ಕೋತಿಯನ್ನು ಆಟವಾಡಿಸುವಾತ ತಾಯಿ ಮನೆಗೆ ಹೋಗುತ್ತೀಯ ಎಂದು ಕೂಡಲೆ ಒಪ್ಪಿಕೊಳ್ಳುವ ಕೋತಿಯ ಹಾಗೆಯೇ ಗಂಡನ ಮನೆಗೆ ಎಂದಾಗ ನಿರಾಕರಿಸುವುದು ಹೀಗೆ ಪ್ರಶ್ನಿಸುವುದು ಹೆಣ್ಣಿನ ಚಿತ್ರಣವನ್ನು ಇಲ್ಲಿ ಕಾಣಬಹುದು. ಲೇಖಕಿ ಊರಿಗೆ ಹೋಗುವಾಗ ಬಸ್ಸು ಕೆಟ್ಟ ಸಂದರ್ಭದಲ್ಲಿ ಕೋತಿಗೆ ತಾನು ಹೇಳಿದಂತೆ ಕೇಳದಿದ್ದಾಗ ಅವನು ಅದನ್ನು ಹಿಂಸಿಸುತ್ತಿದ್ದುದು, ಒಬ್ಬ ಮುದುಕ ಕರಡಿಯನ್ನು ನರ್ತಿಸುವಂತೆ ಒತ್ತಾಯ ಹೇರುತ್ತಿದ್ದುದು, ಅದು ಹೇಳಿದಂತೆ ಕೇಳದಿದ್ದಾಗ ಆ ಮಾಲಿಕ ಆ ಪ್ರಾಣಿಗೆ ಶಿಕ್ಷಿಸುತ್ತಿದ್ದುದು, ಇವೆಲ್ಲ ಲೇಖಕಿಗೆ ಪ್ರಾಣಿಗಳ ಬಗ್ಗೆ ಇದ್ದ ಕರುಣೆಯನ್ನು ಕಾಣಬಹುದು. "ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ"ದಂತೆ ಆರ್ಯಾಂಬ ಅವರಿಗೆ ಕಾಣುತ್ತಿತ್ತು.

ಒಮ್ಮೆ ನದಿ ತೀರಕ್ಕೆ ಹೋದಾಗ ಅಲ್ಲಿ ನಾಯಿಮರಿ ಲೇಖಕಿಗೆ ಸಿಕ್ಕಾಗ ಅದನ್ನು ಜೋಪಾನ ಮಾಡಿ ಮನೆಗೆ ತಂದ ಪ್ರಸಂಗ ಅದನ್ನು ನೋಡಿದ ಅತ್ತೆ ಅದರ ಬಗ್ಗೆ ನಿಷ್ಕರುಣೆಯಿಂದ ಮಾತನಾಡಿದ್ದು ಇವೆಲ್ಲ ಲೇಖಕಿಗೆ ಇಷ್ಟವಾಗಲಿಲ್ಲ. ಇದೆಲ್ಲ ನಡೆದಿದ್ದ ಲೇಖಕಿ ಒಮ್ಮೆ ಊರಿಗೆ ಹೋದ ಸಂದರ್ಭ. ಇದೇ ಸಂದರ್ಭದಲ್ಲಿ ಇನ್ನೊಂದು ಘಟನೆ ನಡೆಯಿತು. ಇವರು ಮಾವನ ಮನೆಯಿಂದ ಬಸ್ ನಿಲ್ದಾಣಕ್ಕೆ ಹೊರಟಾಗ ಅಲ್ಲಿ ಹುಲಿಯೊಂದು ಊರಿಗೆ ನುಗ್ಗಿದಾಗ ಭಯಗೊಂಡ ಜನರು ಅದನ್ನು ಕೊಂದು ಅದರ ಸುತ್ತಾ ನೃತ್ಯ ಮಾಡುತ್ತಾ ಕೋಲಿನಿಂದ ಚುಚ್ಚುತ್ತಾ ಖುಷಿ ಪಡುತ್ತಿದ್ದರು. ಆದರೆ ಲೇಖಕಿ ಮಾತ್ರ ಸತ್ತಿರುವ ಪ್ರಾಣಿಯ ಬಗ್ಗೆ ಮಮ್ಮಲ ಮರುಗಿ 'ನಾಶ ಸುಲಭ ಸೃಷ್ಟಿ ಕಷ್ಟ' ಎನ್ನುತ್ತಾರೆ. ನಮ್ಮಂತೆ ಪ್ರಾಣಿಗಳಿಗೂ ಜೀವವಿದೆ. ಪ್ರಾಣಿ ಮೇಲೆ ಪ್ರೀತಿ ವಿಶ್ವಾಸವಿರಲಿ ಎಂಬುದು ಈ ಕತೆಯ ಸಾರಾಂಶ.

ಈ ಕಥೆಯಲ್ಲಿ ಲೇಖಕಿಗೆ ಮೂಕಪ್ರಾಣಿಗಳ ಬಗ್ಗೆ ಇರುವ ಅನುಕಂಪ, ಪ್ರೀತಿ, ಕಾಳಜಿ, ಆಸಕ್ತಿ ಇವೆಲ್ಲವನ್ನು ಕಾಣಬಹುದು. ಹಾಗೆಯೇ ಕಾಡನ್ನು ನಾಶ ಮಾಡಿದರೆ ವನ್ಯಜೀವಿಗಳು ನಾಡಿಗಲ್ಲದೆ ಇನ್ನೆಲ್ಲಿಗೆ ಹೋಗುತ್ತವೆ ಎಂಬ ವಿವೇಕವೂ ಇದೆ.

**ಉಪಕಾರ** ಎಂಬ ಕತೆಯಲ್ಲಿನ ಸುರೇಶ ಎಂಬುವವರು ಬ್ಯಾಂಕ್‌ನ ಕಟ್ಟಡದ ಸಮೀಪದಲ್ಲಿ ಕಾರು ನಿಲ್ಲಿಸಿ ಕೆಳಗಿಳಿದಾಗ ಮಳೆ ಬರುವಂತಿತ್ತು. ಎಲ್ಲಿ ನೋಡಿದರೂ ಜನರೋ ಜನ. ಅಂದು ಶನಿವಾರ, ನಾಳೆ ಭಾನುವಾರ ಬ್ಯಾಂಕಿಗೆ ರಜ. ಎಲ್ಲಕ್ಕಿಂತ ಮುಖ್ಯವಾಗಿ ತಿಂಗಳ ಮೊದಲ ವಾರವಾಗಿತ್ತು. ಹಿಂದಿನಂತೆ ಇಂದು ಕೆಲಸಗಾರರು ಚೆನ್ನಾಗಿ ಕೆಲಸ ಮಾಡುವುದಿಲ್ಲ ಎಂಬುದು ಅಲ್ಲಿ ನೆರದಿದ್ದ ಜನರ ಅಭಿಪ್ರಾಯವಾಗಿತ್ತು. ಸುರೇಶ ಟೋಕನ್ ಹಿಡಿದು ತೂರಿಸಿ ನೂರು ರೂಪಾಯಿನ ಎರಡು ನೋಟಿನ ಕಂತೆ ಪಡೆದು ಜೇಬಿನಲ್ಲಿಟ್ಟರು. ಬ್ಯಾಂಕ್ ತುಂಬ ಜನರಿಂದ ಕಿಕ್ಕಿರಿದಿದ್ದರಿಂದ ಯಾರೋ ಜೇಬು ಮುಟ್ಟಿದ ಹಾಗಾಯ್ತು. ಜೇಬಿನತ್ತ ಕೈಚಾಚಿದಾಗ ಸಿಕ್ಕಿದ ಕೃಶವಾದ ಕೈಯನ್ನು ಬಲವಾಗಿ ಹಿಡಿದು ಕೊಂಡರು. ಆತ ತನ್ನ ಜೇಬಿಗೆ ಕೈ ತೂರಿಸಿ ನೋಡಿದಾಗ ಎರಡು ನೋಟಿನ ಕಂತೆಗಳಲ್ಲಿ ಒಂದು ಕಂತೆ ಮಾಯವಾಗಿತ್ತು.

ಸುರೇಶ ಜೇಬಿನಿಂದ ಹಣ ಕದ್ದವನು ಹದಿನಾರು ವರ್ಷದ ಯುವಕನಾಗಿದ್ದನು. ಆದರೆ ಆತ 'ನಾನು ಕಳ್ಳನಲ್ಲ, ನಿಮ್ಮ ಜೇಬಿನಿಂದ ಹಣ ಕದಿಯಲಿಲ್ಲ' ಎಂದು ಹೇಳಿ ಬಚಾವಾಗುವ ಪರಿಸ್ಥಿತಿಯಿಂದಲೂ ಅವನು ದೂರವಾಗಿದ್ದ, ಅಷ್ಟರಲ್ಲೆ ಜನರು ಸುತ್ತುವರಿದರು. ಅಲ್ಲಿದ್ದ ಜನರೆಲ್ಲ ಗುದ್ದಿದರು. ಆತ ಹೊಡೀಬ್ಯಾಡಿ, ಆ ಪಾಪ ನಮಗ್ಯಾಕೆ. ಪೋಲಿಸರ ವಶಕ್ಕೆ ಕೊಟ್ಟು ಬಿಡ್ತೀನಿ. ಅವರೇ ಸರಿ ಎಂದು ಸುರೇಶ ತೀರ್ಮಾನಿಸಿ ಕಳ್ಳ ಹುಡುಗನನ್ನು ಕಾರಿನಲ್ಲಿ ಕೂರಿಸಿಕೊಂಡು ಹೊರಟು

ಹೋದನು. ಆದರೆ ರಸ್ತೆಯಲ್ಲಿ ಸಾಗುವಾಗ "ಸಾರ್ ನಿಮ್ಮ ದಮ್ಮಯ್ಯ, ನನಗೇನು ಶಿಕ್ಷೆ ಬೇಕಾದ್ರೂ ಕೊಡಿ, ಆದ್ರೆ ಪೋಲೀಸರಿಗೆ ಒಪ್ಪಿಸಬೇಡಿ...." ಎಂದು ಅಂಗಲಾಚಿ ಬೇಡಿದನು.[1]

ಕಣ್ಣೀರಿನಿಂದ ಕರೆಗಟ್ಟಿದ ಸೀಳು ಮುಖದಲ್ಲಿ ದೈನ್ಯಭಾವ ಅನಾಥಪ್ರಜ್ಞೆ ತಾಂಡವವಾಡುತ್ತಿತ್ತು. ತೊಟ್ಟಿದ್ದ ಮಾಸಲು ಬಣ್ಣದ ಶರಟಿನ ಬಲತೋಳು ಹರಿದಿತ್ತು. ತಲೆಕೂದಲು ಎಣ್ಣೆ ನೀರು ಕಾಣದೆ ಹೊಲಸಾಗಿತ್ತು. ಹೆಸರು ಕೇಳಿದ್ದಕ್ಕೆ ಗೋಪಾಲ ಎಂದನು. ಗೋಪಾಲ ಎಂಬ ಪರಮಾತ್ಮನ ಹೆಸರು ಇಟ್ಟ ಮಾತ್ರಕ್ಕೆ ಕಲಿಯೋ ವೃತ್ತಿಗೆ ಕೈ ಹಾಕಿದ್ಯೇನು? ನಕ್ಕನು ಸುರೇಶ. ಎಲ್ಲಾದರೂ ದುಡಿದು ಸಂಪಾದಿಸೋದು ಬಿಟ್ಟು ಜೇಬಿಗೆ ಕೈ ಹಾಕಿ ನೋಟಿನ ಕಂತೆ ಕದಿಯೋ ವೃತ್ತಿ ನಿನಗ್ಯಾಕೆ?"

ಆ ಕಳ್ಳ ಹುಡುಗ ಗೋಪಾಲನಂತೆ ಸುರೇಶನದು ಅನಾಥ ಬದುಕು. ಅಪ್ಪ ಯಾರೆಂದು ಅವನಿಗೆ ತಿಳಿಯದು. ಒಂದು ರಾತ್ರಿ ಅಂಗಡಿಯ ಹೊರಭಾಗದಲ್ಲಿ ಮಲಗಿದ್ದಾಗ ಸುರೇಶನಿಗೆ ಶಿವಣ್ಣನ ಪರಿಚಯವಾಯ್ತು, ಆತ ದೊಡ್ಡ ಖದೀಮ ಆ ವಿದ್ಯೆಯನ್ನು ಸುರೇಶನಿಗೂ ಕಲಿಸಿದ. ಒಟ್ಟಿನಲ್ಲಿ ಶ್ರೀಮಂತ ಜೀವನ ಅವನಿಗೆ ದಕ್ಕಿತು. ಆದರೆ ಸುರೇಶ ಒಬ್ಬ ಶ್ರೀಮಂತನ ಕೈಗೆ ಸಿಕ್ಕಿಕೊಂಡನು. ಆದರೆ ಅವನು ಇವನನ್ನು ಪೋಲಿಸರ ವಶಕ್ಕೆ ಒಪ್ಪಿಸಲಿಲ್ಲ. ಬದಲಿಗೆ ಮನೆಗೆ ಕರೆದೊಯ್ದು ಶಾಲೆಗೆ ಸೇರಿಸಿ ಪದವಿಧರನನ್ನಾಗಿ ಮಾಡಿದ. ಅವನನ್ನೇ ಆಸ್ತಿಗೆಲ್ಲ ಉತ್ತರಾಧಿಕಾರಿಯಾಗಿ ಮಾಡಿ ಸತ್ತ. ಆತನ ಕೃಪಾಕಟಾಕ್ಷ ಸಿಕ್ಕಿದ ಸುರೇಶ ಈಗ ಶ್ರೀಮಂತ.

ಸುರೇಶ ತನ್ನ ಹಿಂದಿನ ಬದುಕಿನ ನೆನಪಿನಿಂದ ವಾಸ್ತವಸ್ಥಿತಿಗೆ ಬಂದಾಗ ಗೋಪಾಲ ಅವನ ಕಾಲನ್ನು ಹಿಡಿದು ಬೇಡುತ್ತಿದ್ದನು. ಸುರೇಶ ಅವನ ವಯಸ್ಸು ಮುಂತಾದನೆಲ್ಲಾ ವಿಚಾರಿಸಿದ. ಅನಂತರ ಅವನಿಗೆ ಹೊಟ್ಟೆ ತುಂಬ ಊಟ ಕೊಡಿಸಿ. ತನ್ನ ಮನೆಗೆ ಕರೆದೊಯ್ದು ನಿನ್ನನ್ನು ಶಾಲೆಗೆ ಸೇರಿಸ್ತೀನಿ

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೪೮

ಸೇರುತ್ತೀಯ ಎಂದಾಗ ಆಯ್ತು ಎಂದು ಒಪ್ಪಿ ಕಳ್ಳತನ ಬಿಟ್ಟು, ನಿಮ್ಮ ಮನೆಯಲ್ಲಿ ಮರ್ಯಾದೆಯಿಂದ ಬದುಕ್ತೀನಿ ಎಂದು ಗೋಪಾಲ ಕೈಮುಗಿದು ಸುರೇಶನ ಕಾಲಿಗೆ ನಮಸ್ಕರಿಸಿದ. ಆದರೆ ಸುರೇಶ ತನ್ನ ಈ ಬದುಕಿಗೆ ದಾರಿ ತೋರಿಸಿದ ಆತನ ಯಜಮಾನನನ್ನು ತೋರಿಸಿ ನನ್ನ ಈ ಸ್ಥಿತಿಗೆ ಆತನ ಉಪಕಾರವೇ ಕಾರಣವೆಂದು ಕೃತಜ್ಞತೆ ಸಲ್ಲಿಸಿದನು. ನಾನು ಮತ್ತೊಬ್ಬನಿಗೆ ಉಪಕಾರ ಮಾಡಬೇಕೆಂದು ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದೆ, ನೀನು ಸಿಕ್ಕಿದೆ ಎಂದನು.

ಅಂದರೆ ನಾವು ಒಬ್ಬರಿಗೆ ಉಪಕಾರ ಮಾಡಿದರೆ ಆತ ಅದನ್ನರಿತು ಮತ್ತೊಬ್ಬರಿಗೆ ಉಪಕಾರ ಮಾಡಬೇಕು. ಹುಟ್ಟಿದಾಗಲೆ ಯಾರು ಕೆಟ್ಟವರೂ ಅಲ್ಲ ಅಥವಾ ಒಳ್ಳೆಯವನೂ ಅಲ್ಲ. ಸಮಯ, ಸಂದರ್ಭ, ಪರಿಸ್ಥಿತಿಗಳು ಅವನನ್ನು ಗುಣ, ಅವಗುಣನನ್ನಾಗಿ ಮಾಡುತ್ತವೆ ಎಂಬುದು ಈ ಕಥೆಯ ಸಾರ ಹಾಗೂ ಮಾನವೀಯ ಗುಣಗಳನ್ನು ಅಳವಡಿಸಿಕೊಡಿಸಕೊಳ್ಳಬೇಕೆಂಬ ಸೂಚನೆ ನೀಡಿದಂತೆ ಇದೆ ಈ ಕಥೆ ಸಹ ಮನುಷ್ಯನಿಗೆ ನೀವು ಪ್ರೀತಿಯಿಂದ ದಾರಿ ತೋರಿದರೆ ಖಂಡಿತ ಅವನು ಕೆಟ್ಟ ದಾರಿಗೆ ಇಳಿಯಲಾರ ಎಂಬುದು ಇಲ್ಲಿನ ಸಾರಾಂಶ.

**ಆಕೆ ಹೇಳಿದ ಕಥೆ :** ಎಂಬ ಕತೆಯಲ್ಲಿ ನಿರೂಪಕಿ ಒಮ್ಮೆ ಮಗಳು ಶಾಲೆಯಿಂದ ಹಿಂತಿರುಗುವ ಸಮಯವಾಯಿತೆಂದು ಗೇಟಿನ ಬಳಿ ನಿಂತು ರಸ್ತೆಯ ಮೇಲೆ ಕಣ್ಣಾಡಿಸಿದಾಗ ದೂರದಲ್ಲಿ ಸಮವಸ್ತ್ರ ಧರಿಸಿದ್ದ ಮಕ್ಕಳು, ಆ ಗುಂಪಿನಲ್ಲಿ ಮಗಳಿಗಾಗಿ ಹುಡುಕುತ್ತಿರುವಾಗ ಒಂದು ಮಗು ಇವರನ್ನು ಕಂಡು ಮುಗುಳ್ನಗು ನಕ್ಕು ಕೈ ಚಾಚಿತು. ಹರ್ಷ ಆ ಪಾಪುವಿನ ಹೆಸರು. ಪ್ರತಿನಿತ್ಯ ಆ ಹರ್ಷನಿಗೆ ಮುಗುಳ್ನಗೆ ಬೀರುತ್ತಾ ನಿರೂಪಕಿ ನಿಂತಿರುತ್ತಾರೆ.

ಒಂದು ಮಧ್ಯಾಹ್ನ ಬಾಗಿಲು ತಟ್ಟಿದ ಸದ್ದಾದಾಗ, ಹರ್ಷನ ಅಜ್ಜಿ ನಿಂತಿರುತ್ತಾರೆ. ಒಳಗೆ ಬಂದ ಅಜ್ಜಿ ನಿರೂಪಕಿಯನ್ನು ಕಂಡು, ನೀವು ಕಥೆ ಬರೆಯುತ್ತೀರ ಎಂಬುದು ತಿಳಿಯಿತು. ಅದಕ್ಕೆ ಒಂದು ನೈಜ ಕಥೆ ಹೇಳೋಣ ಅಂತ ಬಂದೆ ಎನ್ನುತ್ತಾಳೆ.

ಒಂದು ಬಡ ಕುಟುಂಬ, ಐದು ಜನ ಹೆಣ್ಣುಮಕ್ಕಳು. ಮೂವರಿಗೆ ಹೇಗೋ ಮದುವೆಯಾಯ್ತು. ನಾಲ್ಕನೆಯವಳ ಹೆಸರು ಶಾಂತ. ಇಪ್ಪತ್ತೆರಡು ದಾಟಿದರೂ ಮದುವೆಯಾಗಲಿಲ್ಲ. ಮನೆಯಲ್ಲಿ ಬಡತನ. ಶಾಂತ ಅದೇ ಬೀದಿಯಲ್ಲಿ ಮಹೇಶನನ್ನು ಪ್ರೀತಿಸಿದಳು. ಮನೆಯ ವಿರೋಧದ ನಡುವೆಯೂ ದೇವಸ್ಥಾನದಲ್ಲಿ ಮದುವೆಯಾದರು. ಆದರೆ ಶಾಂತ ತನ್ನ ಒಳ್ಳೆಯ ಗುಣದಿಂದ ಅತ್ತೆ-ಮಾವಂದಿರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿ ಅಚ್ಚುಮೆಚ್ಚಿನ ಸೊಸೆಯಾದಳು. ಶ್ರೀಮಂತಿಕೆಯ ಸುಖದ ಸುಪ್ಪತ್ತಿಗೆಯ ಮೇಲೆ ಹೊರಳಾಡಿದಳ. ಆದರೆ ಏಳು ವರ್ಷಗಳಾದರೂ ಶಾಂತಳಿಗೆ ಮಕ್ಕಳಾಗಲಿಲ್ಲ. ಆ ಕೊರತೆ ಮನೆಯವರನ್ನೆಲ್ಲ ಬಾಧಿಸಿತು. ಉಪವಾಸ, ವ್ರತ, ಪೂಜೆ, ಪುನಸ್ಕಾರ, ನೇಮ, ನಿಷ್ಠೆ ಇತ್ಯಾದಿಗಳಲ್ಲಿ ಶಾಂತಳಿಗೆ ನಂಬಿಕೆಯಿಲ್ಲದಿದ್ದರೂ ಅತ್ತೆಯ ಬಲವಂತಕ್ಕೆ ಆಚರಿಸಿದಳು. ಆದರೆ ಅವಳಾಸೆ ಫಲಿಸಲಿಲ್ಲ. ಮಾವ ಅತ್ತೆ ಮಗನಿಗೆ ಇನ್ನೊಬ್ಬ ಸೊಸೆ ತರುವ ಆಸೆ ಹುಟ್ಟಿತು. ಇದರಿಂದ ಶಾಂತ ಭವಿಷ್ಯ ಕುರಿತು ಚಿಂತಿಸಿದಳು. ನಾನು ಬದುಕಿರುವಾಗ ಇನ್ನೊಂದು ಮದುವೆಯಾಗಬೇಡಿ ಎಂದು ಗಂಡನನ್ನು ಬೇಡಿದಳು.

ನಾನೇಕೆ ಮದುವೆಯಾಗಲಿ. ನಿನಗೆ ತಲೆ ಕೆಟ್ಟಿದೆಯೇನು? ಮಹೇಶನ ಎದುರುತ್ತರ. ಆದರೆ ನಿಜವಾದ ದೋಷವಿದ್ದುದು ಗಂಡನಲ್ಲಿ ಎಂಬುದು ಶಾಂತಳಿಗೆ ತಿಳಿಯಿತು. ಆದರೆ ಎಲ್ಲರೂ ಶಾಂತಳನ್ನು ದೂಷಿಸುತ್ತಿದ್ದರು. ಒಮ್ಮೆ ಮಹೇಶನ ತಾಯಿ ಮದ್ರಾಸಿಗೆ ಹೊರಟಳು. ಏಕೆಂದರೆ ಅವಳಿಗೆ ಇಲ್ಲಿ ತುಂಬಾ ಬೇಜಾರು. ಅಷ್ಟು ಮಾತ್ರವಲ್ಲ. ಇನ್ನೆರಡು ವರ್ಷಗಳಲ್ಲಿ ಮಕ್ಕಳಾಗದಿದ್ದರೆ ಆಸ್ತಿಯೆಲ್ಲಾ ನಿನ್ನ ತಂಗಿ ಹೆಸರಿಗೆ ಬರೆದು ಬಿಡುತ್ತೇನೆ ಎಂಬ ತಂದೆಯ ಆಗ್ರಹ. ಇದರಿಂದ ನೊಂದ ಮಹೇಶ ತನ್ನ ತಂಗಿಯ ಮಗಳನ್ನು ಸಾಕಿಕೊಳ್ಳಲು ತೀರ್ಮಾನಿಸಿದ. ಆದರೆ ಅದಕ್ಕೆ ಭಾವ ಒಪ್ಪಲಿಲ್ಲ. ಅವರಿಗೆ

ಮೂರು ಹೆಣ್ಣುಮಕ್ಕಳು. "ಈ ಸಲವಾದ್ರು ಗಂಡಾಗುತ್ತೆ ಅಂತಿದ್ದೆ, ಅದೂ ಹೆಣ್ಣಾಯ್ತು. ಮೂರು ಹೆಣ್ಣು ಮಕ್ಕಳನ್ನು ಸಾಕಿ ಮದುವೆ ಮಾಡೋದು ಅಂದ್ರೆ ತುಂಬಾ ಕಷ್ಟ."[1]

ಹೆಣ್ಣು ಮಗುವಿನ ಜನನಮನೆಯಲ್ಲಿ ಎಷ್ಟರಮಟ್ಟಿಗೆ ಕೀಳರಿಮೆ ಹುಟ್ಟಿಸುತ್ತದೆಂಬುದನ್ನು ಲೇಖಕಿ ಅರ್ಥಪೂರ್ಣ ಸಾಲುಗಳಲ್ಲಿ ತಿಳಿಸಿದ್ದಾರೆ. ಅಷ್ಟು ಮಾತ್ರವಲ್ಲ ಶಾಂತ ಆ ಮಗುವನ್ನು ಎತ್ತಿಕೊಳ್ಳಲು ಸಮೀಪಿಸಿದಾಗ ಸುಧಳ ಅತ್ತೆ "ಶಾಂತ... ಬಂಜೆಯರು ಎಳೆಮಕ್ಕಳನ್ನು ಮುಟ್ಟಬಾರದು ಎಂದು ಚುಚ್ಚು ಮಾತನಾಡಿದ್ದು ಶಾಂತಳ ಮನಸ್ಸನ್ನು ನೋಯಿಸಿತು. ಅವಳ ಸ್ಥಿತಿಗೆ ನಾನೇ ಕಾರಣ ಎಂದು ಮಹೇಶ ಒಂದು ಪರಿಹಾರ ಹುಡುಕಲು ಪ್ರಯತ್ನಿಸಿದ. ನನ್ನ ಸಲಹೆಗೆ ನೀನು ಒಪ್ಪುವುದಾದರೆ ತಾಯಿಯಾಗ್ತೀಯ ಎಂದನು. ನನ್ನ ಸ್ನೇಹಿತ ಅರವಿಂದನನ್ನು ನಮ್ಮ ಮನೆಯಲ್ಲಿ ಇಟ್ಕೊಳ್ಳೋಣ, ನಿನ್ನ ಮಗುವಿಗೆ ಅವನು ತಂದೆಯಾದರೆ ನಿನಗೆ ತಾಯ್ತನದ ಭಾಗ್ಯ ಸಿಕ್ಕುವುದು." ಆಗ ಶಾಂತ ನನ್ನ ವ್ಯಭಿಚಾರಿ ಮಾಡ್ತೀರಾ ಎಂದು ಇದಕ್ಕೆ ಒಪ್ಪದಿದ್ದಾಗ, ಅವನು ಪ್ರತಿದಿನ ಕುಡಿದು ಬರಲು ಶುರು ಮಾಡುತ್ತಾನೆ. ಆಗ ಶಾಂತ ತುಂಬಾ ಯೋಚಿಸಿ ಒಂದು ನಿರ್ಧಾರಕ್ಕೆ ಬರುತ್ತಾಳೆ. ಮಗುವಿಗಾಗಿ ಈ ಸಂಬಂಧ ಅಲ್ಲ, ನಿಮ್ಮ ಆರೋಗ್ಯಕ್ಕಾಗಿ ಎಂದು ಒಪ್ಪಿಕೊಳ್ಳುತ್ತಾಳೆ. ನಂತರ ಅವಳಿಗೆ ಒಬ್ಬ ಮಗ ಜನಿಸಿ ಮೊಮ್ಮಗ ಹರ್ಷ ಆಗಿರುತ್ತಾನೆ. ಹೆಣ್ಣಿಗೆ ತಾಯ್ತನದ ಬಗ್ಗೆ ಇರುವ ಕಾಳಜಿ ಕಾತುರ ಅದಕ್ಕಾಗಿ ಆಕೆ ಪಡುವ ಪಾಡು ಇಲ್ಲಿ ವ್ಯಕ್ತವಾಗುವುದರ ಜೊತೆಗೆ ಗಂಡ, ಹೆಂಡತಿಯರ ಪ್ರೀತಿ, ಪ್ರೇಮ ಎಂತಹ ತ್ಯಾಗಕ್ಕೂ ಸಿದ್ಧ ಮಾಡುತ್ತದೆ ಎಂಬುದನ್ನು ಇದು ಧ್ವನಿಸುತ್ತದೆ.

**ನಿರೀಕ್ಷೆ :** ವಿದೇಶದಿಂದ ಸ್ವದೇಶಕ್ಕೆ ಮರಳಿ ತಿಂಗಳಾಗಿತ್ತು. ಮಗಳು, ಅಳಿಯ, ಮೊಮ್ಮಕ್ಕಳ ಜೊತೆ ಆರು ತಿಂಗಳು ಅಮೇರಿಕಾದಲ್ಲಿದ್ದು ಹಿಂತಿರುಗಿದ್ದರು. ಒಂಟಿಯಾಗಿದ್ದಾಗ ಇದ್ದಕ್ಕಿದಂತೆ ಲಕ್ಷ್ಮಣರಾಯರ ನೆನಪಾಯ್ತು. ಅವರ ಮನೆಗೆ ಹೋದಾಗ ಮೊಮ್ಮಕ್ಕಳ ಬಗ್ಗೆ ವಿಚಾರಿಸಿದರು,

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೬೦

ನೀವು ಚೆನ್ನಾಗಿದ್ದೀರ ಎಂದಾಗ "ಇದೀವಿ ಇಬ್ಬರೂ ಭೂಮಿಗೆ ಭಾರವಾಗಿ, ಒಳಗೆ ಬಾ" ಪಾರ್ವತಮ್ಮ ಎಪ್ಪತ್ತು ದಾಟಿದ ವೃದ್ಧೆ. ಹಣೆಗೆ ಕಾಸಿನಗಲದ ಕುಂಕುಮವಿಟ್ಟಿದ್ದರು. ಲಕ್ಷ್ಮಣರಾಯರು ಹಾಸಿಗೆ ಹಿಡಿದು ವರ್ಷವಾಗಿತ್ತು. ಇಬ್ಬರು ಹೆಣ್ಣು ಮಕ್ಕಳು ಮಗನನ್ನು ಉನ್ನತ ವಿದ್ಯಾಭ್ಯಾಸಕ್ಕಾಗಿ ಅಮೇರಿಕಾಗೆ ಕಳುಹಿಸಿ ಕಳೆದುಕೊಂಡಿದ್ದರು. ಅವನು ಅಮೇರಿಕಾದಲ್ಲಿ ದೊಡ್ಡ ಮನೆ ಕಟ್ಟಿಸಿದ್ದ ನಿರೂಪಕಿ ಅಲ್ಲಿ ಗೃಹಪ್ರವೇಶಕ್ಕೆ ಹೋಗಿದ್ದುದ್ದನ್ನು ಹೇಳಿದರು. ನಮಗೂ ಫೋನ್ ಮಾಡಿ ಹೇಳಿದ್ದ. ಈಗ ನಾವಿರುವ ಸ್ಥಿತಿಯಲ್ಲಿ ಅಲ್ಲಿಗೆ ಹೋಗಲು ಆಗಲಿಲ್ಲ. ತಾಯಿ ಮಾತ್ರ ಮಗನನ್ನು ನಾನು ಎಷ್ಟು ಬೇಡಿದರೂ ಇಲ್ಲಿ ಉಳಿಯಲಿಲ್ಲ ಎಂಬ ಚಿಂತೆ. ಆದರೆ ತಂದೆಯದು ಸಕಾರಾತ್ಮಕ ಭಾವನೆ.

ಅಮೇರಿಕಾಗೆ ಹೋದ ಮೇಲೆ ಅಲ್ಲಿಯೇ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾಗಿದ್ದ ಇದು ಪಾರ್ವತಮ್ಮಳಿಗೆ ಬೇಸರದಂತಿತ್ತು. ಆದರೆ ಲಕ್ಷ್ಮಣರಾಯರು ಈಗ ಕಾಲ ಬದಲಾಗಿದೆ. ನಾವು ಅದಕ್ಕೆ ಬದಲಾಗಬೇಕೆಂಬ ಪ್ರತಿಕ್ರಿಯೆಯಾಗಿತ್ತು. ಮಕ್ಕಳು ಎಲ್ಲಿದ್ದರೂ ಚೆನ್ನಾಗಿರಲಿ ಹಾಗೂ ಆ ಮಗನು ಅಷ್ಟೇ ಯಾವುದರಲ್ಲೂ ತಂದೆತಾಯಿಗೆ ಕಡಿಮೆಯಾಗದಂತೆ ಅಲ್ಲಿಂದಲೇ ನೋಡಿಕೊಳ್ಳುತ್ತಿದ್ದನು. ಇಲ್ಲಿ ಲೇಖಕಿ ಕೌಟುಂಬಿಕ ಜೀವನದಲ್ಲಿ ಹಣ ಐಶ್ವರ್ಯ ಎಷ್ಟೇ ಇದ್ದರೂ ಪ್ರೀತಿ ವಿಶ್ವಾಸದಿಂದ ನೋಡಿಕೊಳ್ಳಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ತಂದೆ ತಾಯಿಗಳು ಮಕ್ಕಳಿಂದ ಹಣ ಐಶ್ವರ್ಯಕ್ಕಿಂತ ಪ್ರೀತಿ ವಿಶ್ವಾಸವನ್ನು ನಿರೀಕ್ಷಿಸುತ್ತಾರೆಂಬುದನ್ನು ಲೇಖಕಿ ಅತ್ಯಂತ ಪರಿಣಾಮಕಾರಿಯಾಗಿ ಕಥೆಯ ಮೂಲಕ ವಿವರಿಸಿದ್ದಾರೆ. ಸಾಮಾನ್ಯವಾಗಿ ಇವರ ಎಲ್ಲಾ ಕಥೆಗಳಲ್ಲೂ ವಿಘಟನೆಗೊಂಡ ಕೌಟುಂಬಿಕ ಚಿತ್ರಣವನ್ನು ಅತ್ಯಂತ ಶೋಚನೀಯವಾಗಿ ಚಿತ್ರಿಸುತ್ತಾರೆ. ಬೆಳೆದ ಮೇಲೆ ಮಕ್ಕಳಿಗೆ ಹೆತ್ತವರ ಬಗೆಗೆ ಕಾಳಜಿ ಕಡಿಮೆ ಎಂಬುದು ಈ ಕತೆಯ ಸಾರಾಂಶವಾಗಿದೆ.

**ಸಮಸ್ಯೆ :** ರಾಜಮ್ಮನ ಆರು ಮಕ್ಕಳಲ್ಲಿ ಗೋಪಿ ಒಬ್ಬನೇ ಮಗ. ಉಳಿದವರೆಲ್ಲ ಹೆಣ್ಣು ಮಕ್ಕಳು. ಹೆಣ್ಣು ಮಕ್ಕಳಿಗೆಲ್ಲ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿ ಜಗನ್ನಾಥರಾಯರು

ನಿಶ್ಚಿಂತರಾಗಿರುತ್ತಾರೆ. ಮಗನ ವಿದ್ಯಾಭ್ಯಾಸದಲ್ಲಿ, ಭವಿಷ್ಯದಲ್ಲಿ ನೂರಾರು ಕನಸುಗಳನ್ನು ಕಂಡರು. ಆದರೆ ಮೂರ್ತಿ ಪತ್ರಿಕೋದ್ಯಮದಲ್ಲಿ ಆಸಕ್ತಿ, ಲೇಖನಗಳನ್ನು ಬರೆಯತೊಡಗಿದ. ವಿವಾಹ, ದಾಂಪತ್ಯ ಇವುದಾವುದು ಅವನಿಗೆ ಇಷ್ಟವಿರಲಿಲ್ಲ. ಗೋಪಿಗೆ ಚಿಕ್ಕಂದಿನಿಂದಲೂ ಓದುವುದು ಬರೆಯುವುದು ಆಸಕ್ತಿ. ಸಂಘಸಂಸ್ಥೆಗಳಲ್ಲಿ ಆಹ್ವಾನಿಸಿದಾಗ ಭಾಷಣ ಮಾಡುವುದು. ಹಸಿವಾದಾಗ ತಾನೆ ಬೇಯಿಸಿಕೊಂಡು ತಿನ್ನುವುದು ಅವನ ನಿತ್ಯ ಜೀವನದ ಹವ್ಯಾಸಗಳಾಗಿದ್ದವು.

ಒಮ್ಮೆ ಬೆಳಗಾಂನಲ್ಲಿ ನಡೆದ ಅಕ್ಕನ ಮಗಳ ಮದುವೆಗೆ ಗೋಪಿ ಹೋಗಿದ್ದಾಗ ಬಾಲ್ಯ ಸ್ನೇಹಿತ ಪ್ರಭಾಕರನ ಭೇಟಿಯಾಯಿತು. ಹದಿನೈದು ವರ್ಷಗಳು ಪರಸ್ಪರ ನೋಡಿರಲಿಲ್ಲ. ಜೂಜು ಕುದುರೆಯಂತೆ ಕಟ್ಟುಮಸ್ತಾಗಿದ್ದ ಗೆಳೆಯ ಬಡಕಲಾಗಿದ್ದು, ತಲೆಯಲ್ಲಾ ಬೋಳಾಗಿ ನೆತ್ತಿಯ ಹಿಂಭಾಗದಲ್ಲಿ ನಾಲ್ಕಾರು ಕೂದಲುಗಳು ಅಂಟಿಕೊಂಡಿದ್ದವು. ಬೇಸಿಗೆಯಲ್ಲಿ ಎಲೆಗಳೆಲ್ಲ ಉದುರಿದ ಮರದಂತೆ ಇದ್ದಾನೆ. "ಗೋಪಿ ನನ್ನ ಗುರುತು ಸಿಕ್ಕಲಿಲ್ವಾ? ನಾನು ಕಣೋ ಪ್ರಭಾಕರ. ಮದ್ದೂರಿನ ದೋಸ್ತಿ."[1] ಸ್ನೇಹಿತರು ಪರಸ್ಪರ ಆಲಂಗಿಸಿಕೊಂಡರು, ಊಟ ಮಾಡಿ ಮದುವೆ ಛತ್ರದ ಮೂಲೆಯಲ್ಲಿದ್ದ ಕೊಠಡಿಯಲ್ಲಿ ಕುಳಿತು ಹರಟೆಗೆ ಪ್ರಾರಂಭಿಸಿದರು. ಆಡುವ ಮಾತು ಸಾಕಷ್ಟಿತ್ತು. ಪ್ರಭಾಕರ ನಿಸ್ಸಂಕೋಚವಾಗಿ ಗೆಳೆಯನ ಮುಂತೆ ತನ್ನ ಬದುಕನ್ನು ತೆರೆದಿಟ್ಟನು.

ನನಗೆ ಮೂರು ಜನ ಮಕ್ಕಳು. ಎಲ್ಲಾ ಹೆಣ್ಣು ಮಕ್ಕಳೆ. ಗಂಡು ಮಗುವಿಗಾಗಿ ಮೂರು ಪ್ರಯತ್ನಗಳನ್ನು ಮಾಡಿ, ನಾಲ್ಕನೆಯ ಪ್ರಯತ್ನ ಮಾಡದೆ ತೆಪ್ಪಗಾದೆ. ಅದಕ್ಕೆ ಕಾರಣ ಹಣದ ಮುಗ್ಗಟ್ಟು ಹಾಗೂ ಹೆಂಡತಿಯ ಅನಾರೋಗ್ಯ. ಹೆಣ್ಣುಮಕ್ಕಳಿಗೆಲ್ಲಾ ಮದುವೆ. ಗಂಡು ಮಕ್ಕಳು ಅವರ ಪಾಡಿಗೆ ಇದ್ದಾರೆ. ಹೆಂಡತಿ ಸತ್ತು ಆರು ವರ್ಷವಾಯ್ತು. ಈಗ ಒಂಟಿ ಪಿಶಾಚಿಯಾಗಿದ್ದೇನೆ. ಅಲ್ಲಿ ಇಲ್ಲಿ ಓಡಾಡ್ಕೊಂಡಿದ್ದೀನಿ. ಅನಾಥನಂತೆ ಬದುಕ್ತಿದೀನಿ. ನನ್ನ ಆರೋಗ್ಯವೂ ಚೆನ್ನಾಗಿಲ್ಲ. ಕಾಯಿಲೆ ಕಸಾಲೆ

---

1. ಆರ್ಯಾಂಬ ಪಟ್ಟಾಭಿ, ತೆರೆ ಸರಿದಾಗ, ಪು. ೪೮

ಅಂತ ಮಲಗಿದ್ರೆ ನೋಡ್ಕೋಳೋರು ನನಗೆ ಯಾರಿಲ್ಲ. ಹೆಣ್ಮಕ್ಕಳ ಮನೆಲಿರೋದು, ನನಗಿಷ್ಟವಿಲ್ಲ, ಒಬ್ಬ ಮಗ ಇದ್ದಿದ್ರೆ ನನಗೀಗ ಕಷ್ಟ ಬರ್ತಿರಲಿಲ್ಲ. ನಿನ್ನ ಕಥೆ ಏನು ಹೇಳು ಎಂದ ಪ್ರಭಾಕರ. ತಂಗೀರಿಗೆಲ್ಲ ಮದುವೆ ಮಾಡಿದೆ. ಆದರೆ ನಾನು ಆಗಲಿಲ್ಲ. ತೋಟದ ಮನೇಲೆ ವಾಸ, ಗಂಡು ಮಕ್ಕಳಿಲ್ಲಾಂತ ನಿನ್ನ ಹಾಗೆ ಅಳಲ್ಲ. ಯಾಕೆಂದ್ರೆ ನನಗೆ ಮದುವೆಯಿಲ್ಲ, ಮಕ್ಕಳಿಲ್ಲ. ಗಂಡು ಮಕ್ಕಳು ಇದ್ದಿದ್ರೆ ಈ ಕಷ್ಟ ಬರ್ತಿರಲಿಲ್ಲ ಅಂತ ಹೇಳ್ತಿದೀಯಲ್ಲ. ನನ್ನ ಚಿಕ್ಕಪ್ಪನ ಕಥೆ ಹೇಳ್ತೀನಿ ಕೇಳು.

ಚಿಕ್ಕಪ್ಪನಿಗೆ ನಾಲ್ಕು ಗಂಡು ಮಕ್ಕಲು. ಹೆಣ್ಣು ಮಕ್ಕಳಿಲ್ಲ. ಮಕ್ಕಳನ್ನು ಚೆನ್ನಾಗಿ ಓದಿಸಿದ. ಎಲ್ಲರೂ ಬುದ್ಧಿವಂತರೆ. ಒಳ್ಳೆಯ ಕೆಲಸದಲ್ಲಿದ್ದು ಚೆನ್ನಾಗಿ ಹಣ ಸಂಪಾದಿಸುತ್ತಾರೆ. ಆದರೆ ಹೆತ್ತವರನ್ನು ಅಲಕ್ಷ್ಯ ಮಾಡಿ ದೂರದ ಊರುಗಳಲ್ಲಿದ್ದಾರೆ. ತಂದೆ ತಾಯಿ ಇಬ್ಬರೇ ಬಾಡಿಗೆ ಮನೆಯಲ್ಲಿ ವಾಸವಾಗಿದ್ದಾರೆ. 'ನಮಗೊಬ್ಬ ಮಗಳಿದ್ದಿದ್ದರೆ, ಪ್ರೀತಿ ವಿಶ್ವಾಸದಿಂದ ನಮ್ಮನ್ನು ನೋಡಿಕೊಳ್ಳುತ್ತಿದ್ದಳೇನೋ, ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳಿಗೆ ಹೆತ್ತವರನ್ನು ಕಂಡರೆ ಹೆಚ್ಚಿನ ಅಂತಃಕರಣ ಪ್ರೀತಿ ಇರುತ್ತೆ ಅಂತಾರೆ. ಆ ಅದೃಷ್ಟ ನಾವು ಕೇಳ್ಕೊಂಡು ಬರಲಿಲ್ಲ ಚಿಕ್ಕಪ್ಪ ಪೇಚಾಡ್ತಾರೆ, ಎಂದ ಗೋಪಿ. "ನೀನು ಹೇಳ್ತಿರೋದು ನಿಜವೆ ಗೋಪಿ? ಸೊಸೇರು ಮಕ್ಕಳಿಗೆ ಅದೇನು ಮಾಡಿದಾರೋ, ಅವರು ಕುಣಿಸ್ತಾರೆ ಇವರು ಕುಣೀತಾರೆ, ಕಾಲಿನಲ್ಲಿ ಗೆಜ್ಜೆಯೊಂದಿಲ್ಲ ಅಂತ ಚಿಕ್ಕಪ್ಪನ ಆಕ್ಷೇಪಣೆ."

ಸೊಸೆಯರನ್ನು ಬಯ್ಯೋದು ತಪ್ಪು, ಅವರೂ ತವರು ಮನೆ, ಸಂಬಂಧಿಕರನ್ನೆಲ್ಲ ಬಿಟ್ಟು ನೂರೆಂಟು ಆಸೆ ಆಕಾಂಕ್ಷೆಗಳನ್ನು ಎದೆ ತುಂಬ ಹೊತ್ತು ಅತ್ತೆ ಮನೆಗೆ ಬರ್ತಾರೆ. ಗಂಡು ಮಕ್ಕಳು ತಂದೆತಾಯಿಗಳನ್ನು ಅಲಕ್ಷ್ಯ ಮಾಡದೆ ಹೆಂಡತೀರನ್ನೂ ಚೆನ್ನಾಗಿ ನೋಡ್ಕೋಬೋದಲ್ಲ. ಆಗ ಯಾವ ಸಮಸ್ಯೆಯೂ ಬರಲ್ಲ. ಸಾಕಿ ಸಲಹಿದ ಅಪ್ಪ ಅಮ್ಮನಿಗಿಂತ ಹೆಂಡತೀನೇ ಹೆಚ್ಚಾದ್ಲೆ? ಎಂದು ಚಿಕ್ಕಪ್ಪ ಹಿರಿಮಗನನ್ನು ಕೇಳಿದ್ದಕ್ಕೆ "ನಾನೇನು ಹುಟ್ಟಿಸೂಂತ ನಿನ್ನ ಕಾಲಿಗೆ ಬಿದ್ದು ಬೇಡಿಕೊಂಡಿದ್ನೆ? ಹುಟ್ಟಿಸಿದ ಮೇಲೆ ಸಾಕಿ

ಬೆಳೆಸೋ ತಂದೆ ತಾಯಿ ಕರ್ತವ್ಯ. ಮಹಾ ಉಪಕಾರ ಮಾಡಿದ ಹಾಗೆ ಮಾತಾಡ್ತೀಯಲ್ಲ" ಎಂದು ಮಗ ಅಪ್ಪನಿಗೆ ಸವಾಲು ಹಾಕಿದ್ನಂತೆ. ಅವನ ಮಾತ್ನಲ್ಲು ಅರ್ಥವಿದೆ. "ಹುಟ್ಟಿಸಿದ ಮಕ್ಕಳನ್ನು ಸಾಕೋದು ತಂದೆ-ತಾಯಿಗಳ ಕರ್ತವ್ಯ. ಮಕ್ಕಳು ತಂದೆ ತಾಯೀನ ಚೆನ್ನಾಗಿ ನೋಡಿಕೊಂಡರೆ ಸಂತೋಷ ಇಲ್ಲದಿದ್ರೆ ದುಃಖ ಪಡ್ತಾರ್ರು" ಮಕ್ಕಳ ವಿದ್ಯಾಭ್ಯಾಸಕ್ಕಾಗಿ ನಿನ್ನ ಚಿಕ್ಕಪ್ಪ ಆಸ್ತಿನೆಲ್ಲ ಮಾರಿದ ಅಂತೀಯ. ವೃದ್ಧಾಪ್ಯದಲ್ಲಿ ಮಕ್ಕಳಿಂದ ಆಶ್ರಯ ನಿರೀಕ್ಷಿಸೋದು ತಪ್ಪಾ."

ಸರಿ ತಪ್ಪಿನ ಪ್ರಶ್ನೆ ಇಲ್ಲಿ ಬರೋದಿಲ್ಲ. ತಂದೆ ತಾಯಿ ಮಕ್ಕಳಿಂದ ಏನನ್ನು ನಿರೀಕ್ಷೆ ನಿರಾಶೆಗೆ ದಾರಿ ಮಾಡಿಕೊಡುತ್ತೆ. ಚಿಕ್ಕಪ್ಪ ನಾಲ್ಕು ಗಂಡು ಮಕ್ಕಳು ನನಗೆ ಅಹಂಕಾರದಿಂದ ಮೆರೀತಿದ್ದ. "ನನ್ನ ನಾಲ್ಕು ಮಕ್ಕಳೂ ನನ್ನ ರತ್ನಗಳು ಅಂತಿದ್ದ. ಆದರೀಗ ಅವನನ್ನು ನೋಡೋದಕ್ಕಾಗ್ತಿಲ್ಲ, ಹೆಂಡತಿ ಸತ್ತು ಒಬ್ಬನೆ ಇದ್ದಾನೆ, ವಯಸ್ಸಾಗಿದೆ. ಆರೋಗ್ಯವೂ ಚೆನ್ನಾಗಿಲ್ಲ. 'ನಮ್ಮನೇಗೆ ಬಂದಿರಿ. ನಾನೂ ಒಂಟಿ ಅಂತ ಎಷ್ಟೋ ಸಲ ಹೇಳಿದೆ, ಬರಲಿಲ್ಲ. "ನಾಲ್ಕು ಮಕ್ಕಳ ತಂದೆ ನಿನ್ನ ಮನೆಗೆ ಬಂದು ಇರೋದಾ? ಎಂದ. ಒಣಪ್ರತಿಷ್ಠೆಗೇನೂ ಕಮ್ಮಿ ಇಲ್ಲ. ಹಣ, ಆಸರೆ, ಮಕ್ಕಳು ಮೊಮ್ಮಕ್ಕಳ ಜೊತೆಯಿಲ್ಲದೆ ಒಂಟಿಯಾಗಿ ನರಳ್ತಿದ್ದಾನೆ. "ಪ್ರೀತಿ ತ್ಯಾಗಕ್ಕೆ ಯಾವ ಬೆಲೆಯೂ ಇಲ್ಲ. ಏಕೆಂದರೆ ಸಂಬಂಧಗಳೂ ಮನಸ್ಸಿನಂತೆ ಚಂಚಲ. ಬದಲಾಯಿಸ್ತಾನೆ ಇರುತ್ತದೆ. ಕೆಲವೊಮ್ಮೆ ನಮ್ಮ ಮನಸ್ಸು ನಮಗೇ ಅರ್ಥವಾಗಲ್ಲ. ಇನ್ನೂ ಬೇರೆಯವರನ್ನೂ ಅರ್ಥ ಮಾಡ್ಕೊಳ್ಳೋದಕ್ಕೆ ಪ್ರಯತ್ನಿಸಿ, ಸೋತಿದ್ದೇನೆ. ಗೋಪಿ, ಐದು ವರ್ಷಗಳ ಹಿಂದೆ ದಾವಣಗೆರೇಲಿ ಕೃಪಾನಿಧಿ ಸಿಕ್ಕಿದ್ದ. ಹೀಗೆ ಒಂದು ಮದುವೆ ಮನೇಲಿ, ಮಗನ ಮನೇಲಿ ನಾನು ನನ್ನ ಹೆಂಡತಿ ಇದೀವಿ. ಒಬ್ಬನೇ ಮಗ. ಅವನನ್ನು ಬಿಟ್ಟು ನಮಗೆ ತಾನೆ ಬೇರೆ ಯಾರಿದ್ದಾರೆ ಅಂದ. ಹೆಂಡತಿ ಮಕ್ಕಳ ಜೊತೆ ನಮ್ಮೂರಿನಲ್ಲೇ ಇದ್ದಾರೆ. ಸೊಸೆ ನಡವಳಿಕೆ ಸರಿಯಾಗಿಲ್ಲ. ನನ್ನ ಹೆಂಡತಿ ಅಡುಗೆ ಮನೆಗೆ ಹೋದ್ರೂ ಸಿಡುಕ್ತಾಳೆ. ಮನೆಗೆ ಬಂದವರಿಗೆ ಒಂದು ಲೋಟ ಕಾಫಿ ಕೊಡೋ ಸ್ವಾತಂತ್ರ್ಯವೂ ನಮಗಿಲ್ಲ. ಅವಳಿಗೂ ಬ್ಯಾಂಕ್‌ನಲ್ಲಿ

ಕೆಲಸ, ದಿನವೂ ಬೆಳಿಗ್ಗೆ ನಾಯಿಗೆ ಹಾಕ್ತಾರಲ್ಲ ಬ್ರೆಡ್, ಅವಳು ಮಾಡಿಟ್ಟ ಅಡುಗೆ ಮೂರು ಹೊತ್ತು ಬಾಯಿ ಮುಚ್ಚಿಕೊಂಡು ತಿನ್ನಬೇಕು.

ಗೋಪಿಯ ತಲೆಯಲ್ಲಿ ಗೆಳೆಯನೊಡನೆ ನಡೆಸಿದ ಮಾತುಕತೆ ಪ್ರತಿಧ್ವನಿಸುತ್ತಿತ್ತು. ಪ್ರಭಾಕರ, ಚಿಕ್ಕಪ್ಪ, ಕೃಪಾನಿಧಿ, ರಘುಪತಿ, ಕನಕ ಎಲ್ಲರ ಕಥೆಗಳು ಮನಸ್ಸೆಂಬ ತಲೆಯ ಮೇಲೆ ಕಾಣಿಸಿಕೊಂಡವು. ಹೆಣ್ಣು ಮಕ್ಕಳನ್ನು ಹೆತ್ತವರಿಗೆ ಗಂಡು ಮಗುವಿನ ಹಂಬಲ, ತಮಗೊಬ್ಬ ಮಗ ಇದ್ದಿದ್ದರೆ ನಮ್ಮ ಬದುಕು ರೀತಿ ಇರುತ್ತಿರಲಿಲ್ಲ ಎನ್ನುವ ಸಂಕಟ ಗಂಡು ಮಕ್ಕಳನ್ನು ಪಡೆದವರಿಗೆ ಮಗಳ ಮೇಲಾಸೆ, ಮಕ್ಕಳಿಲ್ಲದವರಿಗೆ ಮಕ್ಕಳ ಚಿಂತೆ, ಅನಾಥ ಮಗುವೊಂದನ್ನು ದತ್ತು ತೆಗೆದುಕೊಂಡರೆ ಅದು ತಮ್ಮದಾಗುವುದೇ ಎನ್ನುವ ಆತಂಕ. ದತ್ತು ತೆಗೆದುಕೊಂಡವರಿಗೂ ನಾನಾ ರೀತಿಯ ಸಮಸ್ಯೆ. ಮಕ್ಕಳು ಬೇಕು ಎನ್ನಾರೆ ಮಕ್ಕಳೆ ಇಲ್ಲದವರು, ಮಕ್ಕಳು ಬೇಡ ಎನ್ನಾರೆ ಮಕ್ಕಳ ಹೆತ್ತವರು. ಒಟ್ಟಾರೆ ಒಬ್ಬೊಬ್ಬರಿಗೂ ಒಂದೊಂದು ಚಿಂತೆ ಸಮಸ್ಯೆ ಕಾಡುತ್ತಲೇ ಇರುತ್ತದೆ. ಬಡವರಿಗೆ ಹಣದ ಸಮಸ್ಯೆ, ರೋಗಿಗಳಿಗೆ ಆರೋಗ್ಯದ ಸಮಸ್ಯೆ, ಇಲ್ಲದವರಿಗೆ ಒಂದೇ ಸಮಸ್ಯೆ ಉಳ್ಳವರಿಗೆ ನಾನಾ ರೀತಿಯ ಸಮಸ್ಯೆ. ಮನುಷ್ಯನ ಸಮಸ್ಯೆಗಳಿಗೆ ಕೊನೆ ಮೊದಲಿಲ್ಲ.

* * *

## ಅಧ್ಯಾಯ - ೬

# ಉಪಸಂಹಾರ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳಿದ್ದು ಕತೆ, ಕಾದಂಬರಿ, ನಾಟಕ, ಪ್ರಬಂಧ, ಕಾವ್ಯ, ಆತ್ಮಕಥನ, ಜೀವನ ಚರಿತ್ರೆ, ಕಥನ ಕಾವ್ಯ, ಪ್ರವಾಸ ಕಥನ, ಸಂಗೀತ ಇವೆಲ್ಲವು ಕನ್ನಡ ಸಾಹಿತ್ಯವನ್ನು ಶ್ರೇಷ್ಠ ಮಟ್ಟಕ್ಕೆ ಕೊಂಡೊಯ್ಯಲು ತನ್ನದೇಯಾದಂತಹ ಕೊಡುಗೆಗಳನ್ನು ನೀಡಿದವು. ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಸಣ್ಣಕತೆಯು ಒಂದು ಹೊಸ ಸಾಹಿತ್ಯ ಪ್ರಕಾರವಾಗಿದೆ. ಈ ಒಂದು ಪರಿಕಲ್ಪನೆ ಪ್ರಾಚೀನ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕಾಣಿಸಿದರು ಆಧುನಿಕ ಕಾಲಘಟ್ಟದಲ್ಲಿ ಅದರ ಪ್ರಚುರತೆ, ಜನಪ್ರಿಯತೆ ಹೆಚ್ಚಿತು.

ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನ ಸಾಹಿತ್ಯ ಕೃಷಿ ದೃಷ್ಟಿಯಿಂದ ಬಹಳ ಶ್ರೇಷ್ಠ ಕಾಲಘಟ್ಟವೆಂದೇ ಹೇಳುಬಹುದು. ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯ ದಟ್ಟ ಪ್ರಭಾವ ಉಂಟಾಗಿ ನಮ್ಮ ಕವಿಗಳೆಲ್ಲ ಅದರ ಸದುಪಯೋಗ ಪಡೆದುಕೊಂಡು ಕನ್ನಡ ಸಾಹಿತ್ಯ ಹೊಸ ರೂಪವನ್ನು ಪಡೆಯಲು ಸಹಾಯವಾಯಿತು. ಪಾಶ್ಚಿಮಾತ್ಯರ ಸಾಹಿತ್ಯದಿಂದ ಪ್ರಭಾವಗೊಂಡು ತನ್ನತನವನ್ನು ಮರೆದ ಕಾಲ ಇದು ಎಂದರೆ ತಪ್ಪಾಗಲಾರದು. ಸಾಹಿತಿಗಳ ಸಂಖ್ಯಾ ದೃಷ್ಟಿಯಿಂದ ಇಂದು ಕನ್ನಡ ಸಾಹಿತ್ಯ ಹೆಮ್ಮರವಾಗಿ ಬೆಳೆದು ಎಂಟು ಜ್ಞಾನಪೀಠ ಪ್ರಶಸ್ತಿಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದೆ.

ಆರ್ಯಾಂಬ ಅವರ ಕಥೆಗಳಲ್ಲಿ ಓದುಗನಲ್ಲಿ ಕುತೂಹಲವನ್ನು ಹುಟ್ಟಿಸಿ ಅವನನ್ನು ಕಥೆಯ ಕೊನೆಯವರೆಗೆ ಒಯ್ಯುವ ಅಂತಃಶಕ್ತಿ ಇದೆ. ಸೂಕ್ಷ್ಮದರ್ಶಿಗಳಾದ ಓದುಗರು ಅವರ ಕಥೆಗಳಲ್ಲಿ ವೈವಿಧ್ಯ ವಿಸ್ತಾರಗಳನ್ನುವ ನಿರೀಕ್ಷಿಸಬಹುದು. ಪಟ್ಟಾಭಿ ಅವರ ಕಥನ ಕಲೆ ಬೆಳೆದಂತೆ ಈ ಗುಣಗಳೂ ಬಂದು ಸೇರಿದವೆಂಬ ಭರವಸೆಯನ್ನು ಅವರ ಕೃತಿಗಳಲ್ಲಿ ಕಾಣಬಹುದು. ನಗರ ಕೇಂದ್ರಿತ ಅನುಭವಗಳನ್ನೇ ಬಹುತೇಕ ಕಥೆಗಳೂ ಅಭಿವ್ಯಕ್ತಿಸಿದರೂ, ಗ್ರಾಮೀಣ ಕೇಂದ್ರಿತ ಕತೆಗಳು ಯಾವುದೇ ಪೂರ್ವಗ್ರಹಗಳಿಲ್ಲದೆ ಅಲ್ಲಿಯ ಬದುಕನ್ನು ಓದುಗನಿಗೆ ಮನಮುಟ್ಟುವಂತೆ ತೆರೆದಿಡುವುದನ್ನು ಕಾಣಬಹುದು.

ಆರ್ಯಾಂಬ ಪಟ್ಟಾಭಿ ಅವರ ಕಥೆಗಳಲ್ಲಿ ಜೀವನ ಕುರಿತಾದ ಕುಟುಂಬ ಚಿತ್ರಣ, ಪ್ರಾಣಿಗಳಲ್ಲಿ ಮಾನವೀಯ ಗುಣಗಳನ್ನು ನೋಡುವ, ಪ್ರೀತಿ ಪ್ರೇಮ, ಸಾಂಪ್ರಾದಾಯಿಕ ನಿಲುವು, ಆಧುನಿಕ ಧೋರಣೆಯುಳ್ಳ ಕಥೆಗಳನ್ನು ನೋಡಬಹುದು. ಜೀವನ ಕುರಿತಾದ ಅನ್ವೇಷಣೆ ನಿರೀಕ್ಷೆಗಳು ಇಲ್ಲಿ ಅತ್ಯಂತ ಸಂಕೀರ್ಣ ನೆಲೆಯಲ್ಲಿ ನಡೆದಿರುವುದನ್ನು ಗಮನಿಸುತ್ತೇವೆ. ಅವರ 'ತೆರೆ ಸರಿದಾಗ', 'ಮರಳಿ ಬಂದ ಮಮತೆ', 'ಸಂಬಂಧಗಳು', 'ತಾಯಿ', 'ಒಪ್ಪಂದ' ಈ ಕಥೆಗಳಲ್ಲಿ ಪ್ರೀತಿ ಚಿತ್ರಣ ಮತ್ತು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದಿರುವುದನ್ನು ಕಾಣಬಹುದು. ಅಲ್ಲದೆ ಒಂದು ಕಥೆಗೂ ಮತ್ತೊಂದು ಕಥೆಗೂ ಇರುವ ಕಲಾಪರಿಣಿತಿಯ ಏರುಮುಖದ ಬೆಳವಣಿಗೆಯಲ್ಲಿ ಆರ್ಯಾಂಬ ಅವರ ಪ್ರಯೋಗ ಶೀಲ ಗುಣವೇ ಮುಖ್ಯ ಪಾತ್ರ ವಹಿಸುತ್ತದೆ.

ಆರ್ಯಾಂಬರ ಕಥೆಗಳನ್ನು ಶೈಲಿ ದೃಷ್ಟಿಯಿಂದ ನೋಡಿದಾಗ ಅವರು ಪ್ರಗತಿಶೀಲ ಕತೆಗಾರಲ್ಲೇ ಪ್ರಮುಖರು ಎಂದು ಹೇಳಿದರೆ ತಪ್ಪಾಗಲಾರದು. ಅವರು ತಮ್ಮ ಬರವಣಿಗೆಯಲ್ಲಿ ಮೆರೆದಿರುವ ನೊಂದ ಜನರ ಬಗೆಗೆ ಇರುವ ಮಾನವೀಯ ಸಂಬಂಧಗಳು ಹಾಗೂ ಅಂತರ್‌ಸಂಬಂಧಗಳು, ಕೌಟಿಂಬಿಕ ಚಿತ್ರಣ, ತಂದೆ ತಾಯಿ ಮಕ್ಕಳ ಸಂಬಂಧ ಇವುಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸಿರುವುದನ್ನು

ಗಮನಿಸಬಹುದು. ಮದುವೆ, ಮಕ್ಕಳು, ಬೊಡ ಎಂಬ ಬ್ರಹ್ಮಚಾರಿ, ಮದುವೆಯೇ ಹೆಣ್ಣಿಗೆ ಅಂತಿಮವಲ್ಲ ವಿದ್ಯೆ ಹೆಣ್ಣಿಗೆ ಅವಶ್ಯ ಎಂಬ ಕತೆಗಳನ್ನು ಈ ಅಧ್ಯಯನದಲ್ಲಿ ಕಾಣಬಹುದು. ಅಲ್ಲದೆ ವಸ್ತುವಿನ ಆಯ್ಕೆಯಲ್ಲಿ ತೋರುವ ಆಸ್ಥೆ ತುಂಬಾ ಪ್ರಮುಖವಾದುದು. ಅಲ್ಲದೆ ಕಥೆಗಳಲ್ಲಿ ಬಳಸಿರುವ ಭಾಷೆ ಜನಸಾಮಾನ್ಯನಿಗೂ ಅರ್ಥವಾಗುವಂತೆ ಸರಳ, ಸುಂದರ, ಸುಲಲಿತೆಯಿಂದ ಕೂಡಿದೆ.

ಆರ್ಯಾಂಬ ಪಟ್ಟಾಭಿ ಅವರ ಕತೆಗಳಲ್ಲಿ ಒಟ್ಟಾರೆ ಸ್ತ್ರೀ ಪಾತ್ರಗಳು ಆಧುನಿಕ ನಿಲುವುಳ್ಳವು, ಉದ್ಯೋಗಶೀಲರಾಗಿದ್ದು ಗಂಡ, ಮನೆ, ಮಕ್ಕಳೆಂಬ ಆಸ್ಥೆಯುಳ್ಳಂಥವು. ಅವರು ಕತೆಗಳ ರಚನೆಗೆ ಸಂಬಂಧಿಸಿದಂತೆ ಹೇಳುವುದಾದರೆ ಆ ಕಾಲಘಟ್ಟದಲ್ಲಿ ಗಾಂಧೀ ಪ್ರಭಾವದಿಂದ ಜಾತಿ ರಹಿತ ಸಮಾಜ ನಿರ್ಮಾಣ, ಅನಾಥರೆಲ್ಲ ಕಳ್ಳನಲ್ಲ, ಪರೋಪಕಾರ ಬುದ್ಧಿ, ಮಕ್ಕಳಿಂದ ನಿರ್ಲಕ್ಷ್ಯಕ್ಕೊಳಗಾದ ಹಿರಿಯರು, ತಾಯ್ತನಕ್ಕೆ ಹಂಬಲಿಸುವ ಸ್ತ್ರೀಯರ ಬಗ್ಗೆ, ವಿಜಯನಗರದ ಹಾಳು ಹಂಪೆಯ ಕತೆಯನ್ನು ಹೇಳುವ ಶಿಲಾವೈಭವವನ್ನು ಈ ಸಂದರ್ಭದಲ್ಲಿ ಗುರುತಿಸಬಹುದು.

ಒಟ್ಟಾರೆ ಆರ್ಯಾಂಬ ಪಟ್ಟಾಭಿಯವರ ಸಣ್ಣ ಕಥೆಗಳಲ್ಲಿನ ಸ್ತ್ರೀ ಪಾತ್ರಗಳು ತಮ್ಮ ಸ್ವಂತಿಕೆಗಾಗಿ ಹೋರಾಟ ಮಾಡುವಂಥಹ, ಚಲನಶೀಲ ಗುಣವುಳ್ಳಂಥವು. ಪ್ರೀತಿ-ಪ್ರೇಮಕ್ಕಾಗಿ ಕೊರಗಿ, ಮದುವೆ ಆಗಲಿಲ್ಲವೆಂದು ಮರುಗಿ ನೊಂದರೂ ಸಹ ತಮ್ಮ ಸಮಸ್ಯೆಗೆ ತಾವೇ ಪರಿಹಾರ ಕಂಡುಕೊಂಡಂಥವು. ಕಲಿತ ಸ್ತ್ರೀ ನಾಲ್ಕು ಜನಕ್ಕೆ ಉಪಯೋಗ ಮಾಡಬೇಕೆಂಬ ಆಶಯ ಉಳ್ಳಂಥವು, ಆಧುನಿಕ ಪ್ರಗತಿ ಪಥದ, ಉದಾತ್ತ ಚಿಂತನೆಯ ಸ್ತ್ರೀ ಪಾತ್ರಗಳನ್ನು ಸ್ವಾವಲಂಬಿ ಹೆಣ್ಣುಗಳನ್ನು ಈ ದಿಸೆಯಲ್ಲಿ ಈ ಸಂಬಂಧದಲ್ಲಿ ನಾನು ಗುರುತಿಸಿದ್ದೇನೆ.

* * *

# ಪರಾಮರ್ಶನ ಗ್ರಂಥಗಳು


೧. ಆರ್ಯಾಂಬ ಪಟ್ಟಾಭಿ : ತೆರೆ ಸರಿದಾಗ
ರವಿ ಪಬ್ಲಿಕೇಷನ್, ಮೈಸೂರು, ೨೦೦೦

೨. ಆಧುನಿಕ ಮಹಿಳಾ ಕಥಾ ಸಾಹಿತ್ಯದಲ್ಲಿ ಇನ್ನೆಷ್ಟು ಪುಟಗಳು : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೭

೩. ಆರ್ಯಾಂಬ ಪಟ್ಟಾಭಿ : ಉದಯರವಿ
ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೬೮

೪. ಆರ್ಯಾಂಬ ಪಟ್ಟಾಭಿ : ಮರಳಿ ಬಂದ ಮಮತೆ
ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೬೮

೫. ಅ.ನ.ಕೃ. : ಕನ್ನಡದಲ್ಲಿ ಸಣ್ಣ ಕತೆಗಳು
ಜಯ ಕರ್ನಾಟಕ, ೧೯೪೧

೬. ಲೇಖಕಿಯರ ಸಣ್ಣ ಕಥೆಗಳು : ಕರ್ನಾಟಕ ಲೇಖಕಿಯರ ಸಂಘ (ರಿ),
ಬೆಂಗಳೂರು, ೧೯೮೯

೭. ಗಿರಿಜಾಶಾಸ್ತ್ರಿ : ಕಥಾ ಮಾನಸಿ,
(ಆಧುನಿಕ ಕನ್ನಡ ಸಣ್ಣಕಥೆಗಳ ಸ್ತ್ರೀವಾದಿ ಅಧ್ಯಯನ)
ಸಾಹಿತ್ಯ ಪ್ರಕಾಶನ, ಮುಂಬೈ, ೨೦೦೦

೮. ಕರೀಗೌಡ ಬೀಚಗನಹಳ್ಳಿ : ಶತಮಾನದ ಸಣ್ಣಕಥೆಗಳ ಸಮೀಕ್ಷೆ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩

೯. ಡಿ. ಸುಮಂಗಳ : ಆಧುನಿಕ ಮಹಿಳಾ ಕಥಾ ಸಾಹಿತ್ಯದಲ್ಲಿ
(ಸಣ್ಣಕತೆಗಳು) ಪ್ರತಿಭಟನೆಯ ವಿನ್ಯಾಸಗಳು,
ಮೈ.ವಿ.ವಿ., ಡಿಸೆಂಬರ್, ೨೦೦೯

೧೦. ನಾರಿ, ದಾರಿ, ದಿಗಂತ : ವಿಜಯದಬ್ಬೆ

೧೧. ಅಮೂರ ಜಿ.ಎಸ್. : ಕನ್ನಡ ಕಥನ ಸಾಹಿತ್ಯ,
ಸಣ್ಣ ಕಥೆ ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು, ೨೦೦೩

೧೨. ಡಾ. ಎನ್.ಕೆ. ಕೋದಂಡರಾಮ : ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ

೧೩. ಕೀರ್ತಿನಾಥ ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,
ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩

೧೪. ಎಸ್.ದಿವಾಕರ್ : ಎಲ್ಲಾ ಬಲ್ಲವರಿಲ್ಲ ಈ ಊರಿನಲ್ಲಿ
ಅಂಕಿತ ಪ್ರಕಾಶನ

* * *

